KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೨೯, ೨೦೦೬ (ಆಷಾಢ ೮, ಶಕ ವರ್ಷ ೧೯೨೮) | ಸಂಚಿಕೆ ೨೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ
ಭದ್ರಾವತಿ ವಿಭಾಗ ಭದ್ರಾವತಿ

**ಸಂಖ್ಯೆ: ಎಫ್‌ಓಸಿ.ಸಿಓಎನ್. ಸಿಆರ್ 4/99–2000, ದಿನಾಂಕ: 22ನೇ ಮಾರ್ಚ್ 2006**

ನಿರೂಪಣಾಧಿಕಾರಿ: ಶ್ರೀಮತಿ ಎ. ರಾಧಾದೇವಿ ಭಾಅಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಭದ್ರಾವತಿ ವಿಭಾಗ, ಭದ್ರಾವತಿ

ಫಿರ್ಯಾಧಿದಾರರು: ವಲಯ ಅರಣ್ಯಾಧಿಕಾರಿ,
ಚನ್ನಗಿರಿ ವಲಯ, ಚನ್ನಗಿರಿ

ಅರ್ಜಿದಾರರು : ಶ್ರೀ ಎಂ ಎಸ್ ಸಿದ್ದಪ್ಪ ಬಿನ್ ಗಿರಿಯಪ್ಪ,
ಬಸವಾಪಟ್ಟಣ, ಚನ್ನಗಿರಿ ತಾಲ್ಲೂಕು.

ಪ್ರಕರಣದ ಹಿನ್ನೆಲೆ

ದಿನಾಂಕ: 29–4–1999 ರಂದು ಚನ್ನಗಿರಿ ವಲಯ ಅರಣ್ಯಾಧಿಕಾರಿಗಳ ಆದೇಶದಂತೆ ಜೋಳ್ ದಾಳ್ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿ ವರ್ಗದವರು ಕೂಡ್ಲಿಗೆರೆ ಶಾಖೆಯ ದ್ಯಾಮಣ್ಣನಕೆರೆ ಬೀಟಿನ ದಾನವಾಡಿ ಕ್ರಾಸ್ ಬಳಿ ಅಕ್ರಮವಾಗಿ ಟ್ರಾಕ್ಟರ್ ಹಾಗೂ ಟ್ರೈಲರ್ ಸಂಖ್ಯೆ ಕೆಎ 14 2599 ಹಾಗೂ 2600ರಲ್ಲಿ ಬೀಟೆ ತುಂಡುಗಳು 3=0.301 ಎಂ3 ಸಾಗಾಣಿಕೆ ಮಾಡುತ್ತಿದ್ದನ್ನು ಪತ್ತೆ ಹಚ್ಚಿರುತ್ತಾರೆ. ಸದರಿ ಅಕ್ರಮ ಸಾಗಾಣಿಕೆ ಸಂಬಂಧಿಸಿದಂತೆ ಅಪರಾಧಿಗಳು ಪತ್ತೆ ಆಗಿರುವುದಿಲ್ಲ ಪರಾರಿಯಾಗಿರುತ್ತಾರೆ. ಸದರಿ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ. ಸದರಿ ತುಂಡುಗಳನ್ನು ಕಾಡಿನಲ್ಲಿ ಕೊಯ್ತು ಮಾಡಿ ಅಕ್ರಮವಾಗಿ ವಾಹನದಲ್ಲಿ ಸಾಗಾಣಿಕೆ ಮಾಡುತ್ತಿರುವವರು ಎಂದು ಅಭಿಪ್ರಾಯಿಸಿ ಸದರಿ ತುಂಡುಗಳನ್ನು ತುಂಬಿದ ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 2599–2600 ಹಾಗೂ ಬೀಟೆ ತುಂಡುಗಳು(3=0.301 ಎಂ3) ಅಮಾನತ್ತು ಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ರ 71ಎ ಪ್ರಕಾರ ಕ್ರಮ ಜರುಗಿಸಲು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ಮುಂದೆ ಹಾಜರು ಪಡಿಸಿರುತ್ತಾರೆ. ವಾಹನ ಹಾಗೂ ಬೀಟೆ ತುಂಡುಗಳನ್ನು (3=0.301 ಎಂ3) ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿಗಳು ಚನ್ನಗಿರಿ ವಲಯ, ಚನ್ನಗಿರಿ ರವರ ಸುಪರ್ದಿಗೆ ವಹಿಸಿಕೊಟ್ಟಿರುತ್ತದೆ.

ಈ ಸಂಬಂಧದಲ್ಲಿ ವಾಹನದ ಮಾಲೀಕರಾದ ಶ್ರೀ ಎಂ ಎಸ್ ಸಿದ್ದಪ್ಪ ಬಿನ್ ಗಿರಿಯಪ್ಪ ವ್ಯವಸಾಯಗಾರರು ಬಸವಾಪಟ್ಟಣ ಚನ್ನಗಿರಿ ತಾಲ್ಲೂಕು ಇವರು ದಿನಾಂಕ: 30–4–1999ರಂದು ಅರ್ಜಿಯನ್ನು ಸಲ್ಲಿಸಿ ಸದರಿ ವಾಹನ ಮಾಲೀಕನಾಗಿದ್ದು ಸದರಿ ವಾಹನವನ್ನು ಚನ್ನಗಿರಿ ವಲಯ ಅರಣ್ಯಾಧಿಕಾರಿಗಳು ಅಮಾನತ್ತು ಪಡಿಸಿರುತ್ತಾರೆ. ಸದರಿ ವಾಹನದಿಂದಲೇ ನನ್ನ ಕುಟುಂಬದ ಜೀವನೋಪಾಯ ನಡೆಯಬೇಕಾಗಿರುತ್ತದೆ. ನನಗೆ ಬೇರೆ ಯಾವುದೇ ಉದ್ಯೋಗ ಇರದೆ ವ್ಯವಸಾಯಗಾರನಾಗಿರುತ್ತೇನೆ ಹಾಗೂ ಸದರಿ ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಪ್ರತ್ಯೇಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ನಾನು ಭಾಗಿಯಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ವಾಹನವನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿ ಅವರಣದ ಬಯಲಿನಲ್ಲಿ ಇಟ್ಟಿರುವುದರಿಂದ ಅದು ಉಪಯೋಗಕ್ಕೆ ಬಾರದೇ ಹಾಳಾಗುವ ಸಾಧ್ಯತೆಯಿರುತ್ತದೆ. ಆದ್ದರಿಂದ ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ದನಾಗಿರುತ್ತೇನೆ ಎಂದು ತಿಳಿಸುತ್ತಾ ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆಗೆ ಕೋರಿರುತ್ತಾರೆ.

ಸದರಿ ಅರ್ಜಿದಾರರಿಗೆ ಈ ನ್ಯಾಯಾಲಯದಿಂದ ದಿನಾಂಕ:11–5–1999ರಂದು ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ಹೊರಡಿಸಿ ಅರ್ಜಿದಾರರು ಸಮಜಾಯಿಸಿಯನ್ನು ನೀಡಲು ಸೂಚಿಸಿರುತ್ತದೆ. ಸದರಿ ಅರ್ಜಿದಾರರು ದಿನಾಂಕ:13–5–1999ರಂದು ಈ ನ್ಯಾಯಾಲಯದ ಕಾರಣ ಕೇಳಿ ತಿಳುವಳಿಕೆ ಪತ್ರಕ್ಕೆ ಹೇಳಿಕೆ ನೀಡಿರುತ್ತಾರೆ. ಅವರ ಸಮಜಾಯಿಸಿ ಹೇಳಿಕೆ ಪ್ರಕಾರ ಸದರಿ ಅರ್ಜಿದಾರರು ಟ್ರಾಕ್ಟರ್ ಕೆಎ 14 2599 ಟ್ರೈಲರ್ 2600ರ ಮಾಲೀಕರೆಂದು ಸದರಿ ವಾಹನವನ್ನು ಬೆನಕರಾಜ್ ಅರಬಿಳಿಚಿ ಗ್ರಾಮ ಇವರಿಗೆ ಬಾಡಿಗೆ ಕೊಟ್ಟಿದ್ದು ದಿನಾಂಕ:28–4–1999ರಂದು ವಾಹನವನ್ನು ವಾಪಾಸ್ಸು ತರಲು ಚಾಲಕನಿಗೆ ತಿಳಿಸಿರುತ್ತೇನೆ ಆದರೆ ಸದರಿ ವಾಹನವು ಬಾರದೇ ಇರುವುದರಿಂದ ಬಾಡಿಗೆದಾರರಿಗೆ ವಿಚಾರಿಸಿದಾಗ ಈಗಾಗಲೇ ವಾಹನವನ್ನು ನಿಮ್ಮ ಚಾಲಕ ತೆಗೆದುಕೊಂಡು ಹೋರಗಿರುತ್ತಾನೆ ಎಂದು ತಿಳಿಸಿರುತ್ತಾರೆ. ಮುಂದುವರೆದು ನನ್ನ ಸ್ನೇಹಿತರು ನಿಮ್ಮ ವಾಹನವು ಚನ್ನಗಿರಿ ವಲಯ ಅರಣ್ಯಾಧಿಕಾರಿಗಳ ಅಧೀನ ಕಛೇರಿ ಜೋಳ್ ದಾಳ್ ಡಿಪೋದಲ್ಲಿ ಇದೆ ಎಂದು ತಿಳಿಸಿದ ಮೇರೆಗೆ ವಾಹನ ಚಾಲಕನಾದ ಶ್ರೀ ನಾಗರಾಜ್ ಬಿನ್ ಹನುಮಂತಪ್ಪ ಇವನನ್ನು ಹುಡುಕಿದರು ಸಹ ಸಿಗಲಿಲ್ಲ ಈ ಮೇಲ್ಕಂಡ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ನಮ್ಮ ಜೀವನೋಪಾಯ ವ್ಯವಸಾಯದಿಂದ ನಡೆಯುತ್ತಿದ್ದು, ನಾವು ಇಂತಹ ಕೃತ್ಯದಲ್ಲಿ ಎಂದೂ ಸಹ ಭಾಗಿಯಾಗಿರುವುದಿಲ್ಲ ಹಾಗೂ ನಾನು ಸಾಕಷ್ಟು ಆದಾಯವನ್ನು ವ್ಯವಸಾಯದಿಂದಲೇ ಪಡೆಯುತ್ತಿರುತ್ತೇನೆ. ಅದ್ದರಿಂದ ದಯಮಾಡಿ ವಾಹನವನ್ನು ಬಿಡುಗಡೆ ಮಾಡಿ ಮೊಕದ್ದಮೆಯನ್ನು ಕೈ ಬಿಡಬೇಕಾಗಿ ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು, ಭದ್ರಾವತಿರವರು ದಿನಾಂಕ: 19–5–1999ರಂದು ಅಭಿಯೋಜನೆ ವತಿಯಿಂದ ಅಕ್ಷೇಪಣೇ ಸಲ್ಲಿಸಿರುತ್ತಾರೆ. ಅಭಿಯೋಜನಾ ವತಿಯ ಅಕ್ಷೇಪಣಾ ಪತ್ರದ ಪ್ರಕಾರ ಸದರಿ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿಗಳು, ಚನ್ನಗಿರಿ ಮತ್ತು ಸಿಬ್ಬಂದಿಯವರು ಮೇಲ್ಕಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಮಾನತ್ತು ಪಡಿಸಿಕೊಂಡಿರುತ್ತಾರೆ ಹಾಗೂ ಮೊಕದ್ದಮೆಯನ್ನು ದಾಖಲು ಮಾಡಿಕೊಂಡಿರುತ್ತಾರೆ. ಅರ್ಜಿದಾರರು ವಾಹನ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದನ್ನು ತಡೆಯಲು ಯಾವುದೇ ಕ್ರಮ ಕೈಗೊಂಡಿರುವುದು ಕಂಡು ಬರುವುದಿಲ್ಲ ಸದರಿ ವಾಹನವು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ಮೇಲು ನೋಟಕ್ಕೆ ಕಂಡು ಬರುತ್ತದೆ. ವಾಹನ ಬಿಡುಗಡೆ ಮಾಡಿದಲ್ಲಿ ಪುನ: ಇದೇ ರೀತಿಯ ಕೃತ್ಯಗಳಿಗೆ ವಾಹನವನ್ನು ತೊಡಗಿಸುವ ಸಾಧ್ಯತೆ ಹೆಚ್ಚಾಗಿರುತ್ತೆಂದು ಅರ್ಜಿದಾರರ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಲು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿ ಫಿರ್ಯಾದಿದಾರರು ಸಲ್ಲಿಸಿದ ದಾಖಲಾತಿಗಳು ಅರ್ಜಿದಾರರು ಸಲ್ಲಿಸಿದ ಅರ್ಜಿ ಹಾಗೂ ಅಭಿಯೋಜನಾ ವತಿಯಿಂದ ಸಲ್ಲಿಸಿದ ಅಕ್ಷೇಪಣೆಗಳನ್ನು ಪರಿಶೀಲಿಸಿ ವಾಹನವು ವ್ಯವಸಾಯ ಕೆಲಸ ಕಾರ್ಯಗಳಿಗೆ ಉಪಯೋಗ ಅಗುವಂತಹ ವಾಹಸವಾಗಿದ್ದು ಇಲಾಖಾ ಕಛೇರಿಯಲ್ಲಿ ವಿಚಾರಣೆ ಅಂತಿಮ ಆಗುವವರೆಗೂ ನಿಲ್ಲಿಸುವುದು ಸೂಕ್ತ ಅಲ್ಲವೆಂದು ಭಾವಿಸಿ ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗಧಿ ಪಡಿಸಿದ ಬೆಲೆಯಷ್ಟು ಬ್ಯಾಂಕ್ ಗ್ಯಾರಂಟಿ ಹಾಗೂ ಇತರೆ ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡನ್ನು ನೀಡಲು ಆದೇಶಿಸಿ ವಾಹನವನ್ನು ವಿಚಾರಣೆ ಬಾಕಿಯಿರಿಸಿಕೊಂಡು ತಾತ್ಕಾಲಿಕವಾಗಿ ಬಿಡುಗಡೆಗೆ ದಿನಾಂಕ:4–6–1999ರಂದು ಆದೇಶ ಮಾಡಿರುತ್ತದೆ. ವಾಹನದ ಮಾಲೀಕರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗಧಿ ಪಡಿಸಿದ ಬೆಲೆ ರೂ.60000–00ಕ್ಕೆ ಬ್ಯಾಂಕ್ ಗ್ಯಾರಂಟಿ ಹಾಗೂ ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡ್‌ನ್ನು ನೀಡಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ: 8–3–2000 ರಿಂದ 22–2–2006ರವರೆಗೆ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ಅರ್ಜಿದಾರರ/ ವಾಹನದ ಮಾಲೀಕರ ಹೇಳಿಕೆಯನ್ನು

ದಾಖಲಿಸಿಕೊಳ್ಳಲಾಯಿತು ಪ್ರಾಸಿಕ್ಯೂಷನ್ ಪರವಾಗಿ ದಿನಾಂಕ:11–10–2000ರಂದು ಶ್ರೀ ಎಸ್ ಓ ದಿನೇಶ್ ವನಪಾಲಕರು ಪ್ರಾಸಾ 1 ಎಂದು ದಿನಾಂಕ:4–7–2001ರಂದು ಶ್ರೀ ಕೆ ಸತ್ಯನಾರಾಯಣ ಅರಣ್ಯ ರಕ್ಷಕ ಇವರನ್ನು ಪ್ರಾಸಾ 2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಅರ್ಜಿದಾರರ ಪರವಾಗಿ ಅವರ ವಕೀಲರು ದಿನಾಂಕ:2–1–2002ರಂದು ವಾಹನದ ಮಾಲೀಕರಾದ ಶ್ರೀ ಎಂ ಎಸ್ ಸಿದ್ದಪ್ಪ ಬಿನ್ ಗಿರಿಯಪ್ಪರವರನ್ನು ಡಿಸಾ1 ಎಂದು ಹಾಗೂ ಅರ್ಜಿದಾರರ ಪರ ಸಾಕ್ಷಿದಾರರಾದ ಶ್ರೀ ಬೆನಕರಾಜ್ ಬಿನ್ ಕರಿಬಸಪ್ಪ ಇವರನ್ನು ಡಿಸಾ2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರ ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 2599–2600ರಲ್ಲಿ ಬೀಟೆ ತುಂಡುಗಳು 3=0.301 ಎಂ3 ನ್ನು ಕಾನೂನಿನ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ಕಾಯ್ದೆ 71(ಬಿ) ಪ್ರಕಾರ ವಾಹನದ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ವಾಹನದ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ.
5. ಏನೂ ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮತ್ತು ಮೂರನೇ ಭಾಗದ ಪ್ರಶ್ನೆಗೆ ಇಲ್ಲಾ ಎಂದಾಗಿರುತ್ತದೆ.
4. ನಾಲ್ಕನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಕಾರಣಗಳು**

**ಅಂಶ:** 1

ದಿನಾಂಕ: 29–4–99ರಂದು ಚನ್ನಗಿರಿ ವಲಯ ಅರಣ್ಯಾಧಿಕಾರಿಗಳ ಆದೇಶದಂತೆ ಜೋಳ್‌ದಾಳ್ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿ ವರ್ಗದವರು ಕೂಡ್ಲಿಗೆರೆ ಶಾಖೆಯ ದ್ಯಾಮಣ್ಣನಕೆರೆ ಬೀಟಿನ ದಾನವಾಡಿ ಕ್ರಾಸ್ ಬಳಿ ಅಕ್ರಮವಾಗಿ ಟ್ರಾಕ್ಟರ್ ಹಾಗೂ ಟ್ರೈಲರ್ ಸಂಖ್ಯೆ ಕೆಎ 14 2599 ಹಾಗೂ 2600ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಬೀಟೆ ತುಂಡುಗಳು 3=0.301ಎಂ3ನ್ನು ವಶ ಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 37/99–2000ನ್ನು ದಾಖಲು ಮಾಡಿ ವಾಹನ ಹಾಗೂ ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದ ಸಮಕ್ಷಮ ದಾಖಲಾತಿಗಳೊಂದಿಗೆ ಹಾಜರು ಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾ ವತಿಯಿಂದ ಮೇಲ್ಕಂಡ ಪ್ರಾಸಿಕ್ಯೂಷನ್ ಸಾಕ್ಷಿದಾರರಾದ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು ಅವರ ಹೇಳಿಕೆ ಪ್ರಕಾರ ದಿನಾಂಕ:28–4–1999ರಂದು ರಾತ್ರಿ ಗಸ್ತು ಮಾಡುತ್ತಾ ದಾನವಾಡಿ ಬಸ್ ನಿಲ್ದಾಣದ ಹತ್ತಿರ ಕಾಯುತ್ತಿರುವಾಗ ದಿನಾಂಕ:29–4–1999 ಬೆಳಗಿನ ಜಾವ 3–00 ಗಂಟೆ ಸುಮಾರಿಗೆ ಒಂದು ಟ್ರಾಕ್ಟರ್ ಚನ್ನಗಿರಿ ಕಡೆಯಿಂದ ಭದ್ರಾವತಿ ಕಡೆಗೆ ಬರುತ್ತಿತ್ತು. ನಮ್ಮನ್ನು ದೂರದಿಂದಲೇ ನೋಡಿದ ಟ್ರಾಕ್ಟರ್ ಚಾಲಕ ಟ್ರಾಕ್ಟರ್‌ನ್ನು ನಮ್ಮಿಂದ ದೂರದಲ್ಲಿಯೇ ನಿಲ್ಲಿಸಿ ಅಲ್ಲಿಂದ ಓಡಿ ಹೋದ ಹಾಗೂ

ಟ್ರಾಕ್ಟರ್ ನಲ್ಲಿದ್ದ ಇನ್ನು 2 ಜನ ವ್ಯಕ್ತಿಗಳು ಓಡಿ ಹೋದರು ಟ್ರಾಕ್ಟರ್ ಇಂಜಿನ್ ನಂ.ಕೆ 14 2599 ಇತ್ತು ಟ್ರೈಲರ್ ನಂ. ಇರಲಿಲ್ಲ ನಂತರ ವಾಹನವನ್ನು ಪರಿಶೀಲಿಸಲಾಗಿ ಟ್ರೈಲರ್ ನ ಮೇಲ್ಭಾಗದಲ್ಲಿ ತೆಂಗಿನ ಗರಿಗಳನ್ನು ಮುಚ್ಚಲಾಗಿತ್ತು. ಅದನ್ನು ತೆಗೆದು ನೋಡಿದಾಗ ಅದರ ಕೆಳಗೆ 3 ಬೀಟೆ ಜಾತಿಯ ತುಂಡುಗಳು ಇದ್ದವು ಅವುಗಳ ತುದಿ ಬುಡದಲ್ಲಿ ಯಾವುದೇ ಮಾರ್ಕ್ ಇರಲಿಲ್ಲ ಮತ್ತು ಟ್ರಾಕ್ಟರ್‌ನಲ್ಲಿದ್ದ ಅಸಾಮಿಗಳು ಓಡಿಹೋಗಿದ್ದರಿಂದ ಅದು ಕಳ್ಳ ಸಾಗಾಣಿಕೆ ಅಂತ ಖಚಿತವಾಯಿತು. ಆದ್ದರಿಂದ 3 ಬೀಟೆ ತುಂಡುಗಳಿಗೆ ಕ್ರಮಸಂಖ್ಯೆ 1 ರಿಂದ 3 ಅಂತ ಟ್ರಾಕ್ಟರ್‌ಗೆ ಕ್ರಮಸಂಖ್ಯೆ 4 ಅಂತ ಹಾಗೂ ಪ್ರತಿ ತುಂಡಿನ ಮೇಲೆ ಎಫ್ ಐ ಅರ್ ಸಂಖ್ಯೆ 049071 ಅಂತ ಕೆಂಪು ಬಣ್ಣದಿಂದ ಬರೆದು ತುಂಡುಗಳನ್ನು ಅಳತೆ ಮಾಡಿ ಅವುಗಳ ಮೇಲೆ ಇಲಾಖಾ ಛಾಪಾ ಕೆವಿನ್ ಎಫ್ ಡಿ 10 ಬಿಬಿ ಅಂತ ಬರೆಯಲಾಯಿತು. ಹಾಗೂ ಈ ಬಗ್ಗೆ ಸ್ಥಳದಲ್ಲಿಯೇ ಟಾರ್ಚ ಬೆಳಕಿನ ಸಹಾಯದಿಂದ ಮಹಜರ್ ಮಾಡಲಾಯಿತು. ಸದರಿ ಮಹಜರ್ ನ್ನು ನಿಶಾನೆ ಪಿ1 ಎಂದು ಸಾಕ್ಷಿಯ ಸಹಿಯನ್ನು ಕ್ರಮವಾಗಿ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಲಾಯಿತು. ಈ ಬಗ್ಗೆ ಅರಣ್ಯ ಮೊಕದ್ದಮೆಯನ್ನು ನೊಂದಾಯಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಸಲ್ಲಿಸಿದ್ದು ಅದನ್ನು ನಿಶಾನೆ ಪಿ2 ಮತ್ತು ಸಾಕ್ಷಿಯ ಸಹಿಯನ್ನು ಪಿ2ಎ ಅಂತ ಗುರುತಿಸಲಾಯಿತು. ವಶ ಪಡಿಸಿಕೊಂಡ ಸ್ವತ್ತುಗಳ ಬಗ್ಗೆ ವರದಿ ಸಲ್ಲಿಸಿದ್ದು ಅದನ್ನು ನಿಶಾನೆ ಪಿ3 ಮತ್ತು ಸಾಕ್ಷಿಯ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಲಾಯಿತು. 3 ಬೀಟೆ ತುಂಡುಗಳನ್ನು ಹಾಗೂ ವಾಹನವನ್ನು ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಟ್ರಾಕ್ಟರ್‌ನಲ್ಲಿ ಇದ್ದ ವ್ಯಕ್ತಿಗಳು ಯಾರೂ ಅಂತ ನಾವು ವಿಚಾರಣೆ ಮಾಡಲಿಲ್ಲ ಅವರು ಯಾರೂ ಅಂತ ಖಚಿತವಾಗಿ ತೋರುತ್ತಿಲ್ಲ. ಟ್ರಾಕ್ಟರ್ ಮಾಲೀಕರಿಗೂ ಮತ್ತು ಟ್ರಾಕ್ಟರ್‌ನಲ್ಲಿ ಅಕ್ರಮ ಸಾಗಾಣಿಕೆಗೂ ಯಾವುದೇ ಸಂಬಂಧ ಇಲ್ಲ ಅನ್ನುವುದು ಸರಿಯಲ್ಲ. ಮಹಜರ್‌ನ್ನು ಈ ಕಛೇರಿಯಲ್ಲಿ ಮಾಡಲಾಗಿದೆ ಅನ್ನುವುದು ಸರಿಯಲ್ಲ.

ಮೇಲ್ಕಂಡ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್ ನಲ್ಲಿರುವ ಅಂಶಗಳಿಗೂ ತಾಳೆ ಹೊಂದಿರುತ್ತದೆ. ಅಲ್ಲದೇ ಎಲ್ಲಾ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದೇ ಅಗಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು ಹಾಗೂ ಸೌದೆ ಸಾಗಾಣಿಕೆ ಅಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ಸಂಶಯ ರಹಿತವಾಗಿ ರುಜುವಾತು ಪಡಿಸಿರುತ್ತಾರೆ. ಈ ಬಗ್ಗೆ ಅಧಿಕೃತವಾದ ಸಾಕ್ಷ್ಯಧಾರಗಳನ್ನು ಸಹ ನೀಡಿರುತ್ತಾರೆ ಹಾಗೂ ಗುರುತಿಸಿಕೊಂಡಿರುತ್ತಾರೆ. ಅಂಶ 1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:2:**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಟ್ರಾಕ್ಟರ್ ಮತ್ತು ಟ್ರೈಲರ್ ಕೆಎ 14 2599–2600ರ ಮಾಲೀಕರಾದ ಶ್ರೀ ಎಂ ಎಸ್ ಸಿದ್ದಪ್ಪ ಬಿನ್ ಗಿರಿಯಪ್ಪ, ಬಸವಾಪಟ್ಟಣ ಚನ್ನಗಿರಿ ತಾಲ್ಲೂಕು ಇವರು ದಿನಾಂಕ:30–4–1999ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು ದಿನಾಂಕ:11–5–1999ರಂದು ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಈ ಕಾರ್ಯಾಲಯದಿಂದ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ದಿನಾಂಕ:13–5–1999ರಂದು ಸಮಜಾಯಿಸಿಯನ್ನು ನೀಡಿರುತ್ತಾರೆ. ಅರ್ಜಿದಾರರು ಈ ನ್ಯಾಯಾಲಯಕ್ಕೆ ಅನೇಕ ಬಾರಿ ಹಾಜರಾಗಿರುತ್ತಾರೆ. ಅವರು ಸಾಕ್ಷಿ ನುಡಿದಿರುತ್ತಾರೆ ಮತ್ತು ಸಾಕ್ಷಿದಾರರನ್ನು ಸಹ ಹಾಜರು ಪಡಿಸಿ ಸಾಕ್ಷಿ ನೀಡಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಅರ್ ಸಿ ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ–2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:3:**

ವಾಹನದ ಅರ್ ಸಿ ಮಾಲೀಕರಾದ ಶ್ರೀ ಎಂ ಎಸ್ ಸಿದ್ದಪ್ಪ ಬಿನ್ ಗಿರಿಯಪ್ಪ, ಬಸವಾಪಟ್ಟಣ, ಚನ್ನಗಿರಿ ಇವರು ದಿನಾಂಕ:30–4–1999ರಂದು ಈ ಪ್ರಾದಿಕಾರದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ಸಮಜಾಯಿಸಿ ನೀಡಿರುತ್ತಾರೆ. ದಿನಾಂಕ:2–1–2002ರಂದು ವಾಹನದ ಮಾಲೀಕರು ಈ ನ್ಯಾಯಾಲಯದ ಸಮಕ್ಷಮ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರು ಮಾಡಿದ ಮುಖ್ಯ ವಿಚಾರಣೆಯಲ್ಲಿ ಹೇಳಿಕೆ ನೀಡಿ ಟ್ರಾಕ್ಟರ್ ಮತ್ತು ಟ್ರೈಲರ್‌ನ್ನು ಅರ್ ಸಿ ಮಾಲೀಕ ನಾನೇ ಅಗಿರುತ್ತೇನೆ ನಾನು ನನ್ನ ಟ್ರಾಕ್ಟರ್‌ನ್ನು ಅರಬಿಳಿಚಿ ಗ್ರಾಮಕ್ಕೆ ಬೆನಕರಾಜ್ ಎನ್ನುವವರಿಗೆ ಮಣ್ಣು ಹೇರಲು ಬಾಡಿಗೆಗೆ ಕಳುಹಿಸಿಕೊಟ್ಟಿದ್ದೆ ದಿನಾಂಕ:20–4–99ರಂದು ಟ್ರಾಕ್ಟರ್‌ನ್ನು ಕಳುಹಿಸಿಕೊಟ್ಟಿದ್ದೆ ಅದು 29–4–99ರಂದು ವಾಪಾಸ್ಸು ಬರಬೇಕಾಗಿತ್ತು ಆದರೆ ಬಾರದೇ ಇದ್ದಾಗ ನಾನು ಟ್ರಾಕ್ಟರ್ ಕಳುಹಿಸಿಕೊಡುವಂತೆ ಪೋನ್ ಮಾಡಿದೆ ಅಗ ಅವರು ಟ್ರಾಕ್ಟರ್‌ನ್ನು ನಿನ್ನೆಯೇ ಕಳುಹಿಸಿರುವುದಾಗಿ

ತಿಳಿಸಿದರು ನಂತರ ನಾನು ಟ್ರಾಕ್ಟರ್ ನೋಡುವ ಸಲುವಾಗಿ ಅರಬಿಳಿಚಿಗೆ ಹೋಗಬೇಕು ಅಂತ ಚನ್ನಗಿರಿಗೆ ಬಂದಾಗ ಅಲ್ಲಿ ನನ್ನ ಸ್ನೇಹಿತರೊಬ್ಬರು ನಮ್ಮ ಟ್ರಾಕ್ಟರ್ ಜೋಳ್‌ದಾಳ್ ಅರಣ್ಯ ಕಛೇರಿಯಲ್ಲಿ ಇರುವ ಬಗ್ಗೆ ತಿಳಿಸಿದರು ನಂತರ ಜೋಳ್ ದಾಳ್ ಕಛೇರಿಗೆ ಬಂದು ನೋಡಿದಾಗ ಅಲ್ಲಿ ನನ್ನ ಟ್ರಾಕ್ಟರ್ ಮತ್ತು ಟ್ರಾಕ್ಟರ್‌ನಲ್ಲಿ ಮರದ ತುಂಡುಗಳು ಇದ್ದವು ಈ ಬಗ್ಗೆ ವಿಚಾರಿಸಿದಾಗ ನಮ್ಮ ಟ್ರಾಕ್ಟರ್‌ನಲ್ಲಿ ಮರದ ತುಂಡುಗಳನ್ನು ಹೇರಿಕೊಂಡು ತರುತ್ತಿದ್ದಾಗ ದಾನವಾಡಿ ಕೆರೆಯ ಹತ್ತಿರ ಅದನ್ನು ಬೆಳಗಿನ ಜಾವ ಹಿಡಿದಿರುವುದಾಗಿಯೂ ಮತ್ತು ಅದರಲ್ಲಿ ಅಸಾಮಿಗಳು ಇರಲಿಲ್ಲ ಅಂತ ಅರಣ್ಯ ಸಿಬ್ಬಂದಿಯವರಿಂದ ತಿಳಿದು ಬಂತು ನಂತರ ವಾಹನದ ಚಾಲಕನ ಬಗ್ಗೆ ವಿಚಾರಿಸಿದಾಗ ಅತನು ಅಲ್ಲಿ ಇರಲಿಲ್ಲ. ನಂತರ ಅವರ ಸ್ವಂತ ಊರಾದ ಹರಪನಹಳ್ಳಿಗೆ ಹೋಗಿ ವಿಚಾರ ಮಾಡಿದಾಗ್ಯೂ ಅತ ಅಲ್ಲಿ ಸಿಗಲಿಲ್ಲ, ನಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಟ್ರಾಕ್ಟರ್‌ನ್ನು ಮಧ್ಯಂತರ ದಾವಾಕ್ಕೆ ಒಪ್ಪಿಸಿಕೊಂಡಿರುತ್ತೇನೆ. ನನಗೆ 25 ಎಕರೆ ಜಮೀನು ಇರುತ್ತದೆ. ನನಗೆ ಜಮೀನಿನಿಂದ ಅದಾಯ ಇದೆ ನನ್ನ ಒಕ್ಕಲುತನಕ್ಕೋಸ್ಕರ ಟ್ರಾಕ್ಟರ್ ಬೇಕಾಗುತ್ತದೆ. ಆದ್ದರಿಂದ ನನ್ನ ಟ್ರಾಕ್ಟರ್‌ನ್ನು ಬಿಟ್ಟುಕೊಡಬೇಕು ಅಂತ ಕೇಳಿಕೊಳ್ಳುತ್ತೇನೆ. ಬಿ ಎಕ್ಸ್ ಟ್ರಾಕ್ಟ್ ಹಾಜರು ಪಡಿಸಿದ್ದು ಅದನ್ನು ನಿಶಾನೆ ಡಿ1 ಮತ್ತು ಡಿ2 ಅಂತ ಗುರುತಿಸಲಾಗಿದೆ.

ಅಭಿಯೋಜನಾ ವತಿಯಿಂದ ಮಾಡಿದ ಪಾಟೀ ಸವಾಲಿನಲ್ಲಿ ಹೇಳಿಕೆ ನೀಡಿ ನಮ್ಮ ಚಾಲಕ ನಾಗರಾಜ ಅನ್ನುವವನು ಅಗಿದ್ದ. ಅವನು 6 ತಿಂಗಳಿನಿಂದ ಕೆಲಸ ಮಾಡುತ್ತಿದ್ದ ಅತ ನಾನು ಹರಪನಹಳ್ಳಿ ವಾಸಿ ಅಂತ ಹೇಳಿದ್ದ ಅದರೆ ಅವರ ಖಚಿತವಾದ ವಿಳಾಸ ಗೊತ್ತಿಲ್ಲ ಆ ಚಾಲಕ ಈಗ ಎಲ್ಲಿದ್ದಾನೆ ಅನ್ನುವುದು ಗೊತ್ತಿಲ್ಲ ನಾವು ನಮ್ಮ ಟ್ರಾಕ್ಟರ್‌ನ್ನು ಸದರಿ ಚಾಲಕನ ಜೊತೆಗೆ ಮಾತ್ರ ಕಳುಹಿಸಿಕೊಟ್ಟಿದ್ದೆವು. ಬೇರೆ ಯಾರೂ ನನ್ನ ಮನೆಯವರು ಹೋಗಿರಲಿಲ್ಲ. ನಾವು ಬೆನಕರಾಜು ಅನ್ನುವವರಿಗೆ ಟ್ರಾಕ್ಟರ್‌ನ್ನು ಕಳುಹಿಸಿಕೊಟ್ಟಿದ್ದೆವು. ಬೆನಕರಾಜು ಟ್ರಾಕ್ಟರ್ ಕಳುಹಿಸಿಕೊಟ್ಟ ದಿನ ನಮಗೆ ಪೋನ್ ಮುಖಾಂತರ, ಕೆಲಸ ಮುಗಿದಿದ್ದರಿಂದ ಟ್ರಾಕ್ಟರ್ ಕಳುಹಿಸಿ ಕೊಟ್ಟಿರುವುದಾಗಿ ತಿಳಿಸಿದ ನನಗೆ ರಾತ್ರಿ 8 ಗಂಟೆಗೆ ಪೋನ್ ಮಾಡಿ ಸಂಜೆ 6 ಗಂಟೆಗೆ ಟ್ರಾಕ್ಟರ್ ಬಿಟ್ಟಿರುವುದಾಗಿ ತಿಳಿಸಿದನು ಅರಬಿಳಿಚಿಯಿಂದ ಬಸವಾಪಟ್ಟಣ ಸುಮಾರು 50 ಕಿಲೋಮೀಟರ್ ದೂರ ಅಗುತ್ತದೆ. 3 ಗಂಟೆ ಅವಧಿಯಲ್ಲಿ ನಮ್ಮ ಗ್ರಾಮಕ್ಕೆ ಬರಬಹುದು ನಾನು ಮಾರನೇ ದಿವಸ 12 ಗಂಟೆಗೆ ಬಸವಾ ಪಟ್ಟಣ ಬಿಟ್ಟು ಅರಬೆಳಿಚಿಗೆ ಬರುವ ಸಲುವಾಗಿ ಚನ್ನಗಿರಿಗೆ ಬಂದೆ. ಅರಬೆಳಿಚಿ ಬೆನಕರಾಜ ಈಗ ಜೀವಂತ ಇದ್ದಾನೆ ಜೋಳ್‌ದಾಳ್ ಕಛೇರಿಗೆ ಬಂದು ನಮ್ಮ ಟ್ರಾಕ್ಟರ್ ನೋಡಿದಾಗ ಅದರಲ್ಲಿ 2 ಬೀಟೆ ತುಂಡುಗಳು ಇದ್ದವು ನಾನೇ ನನ್ನ ಚಾಲಕನಿಗೆ ನನ್ನ ಟ್ರಾಕ್ಟರ್‌ನಲ್ಲಿ ಬೀಟೆ ತುಂಡುಗಳನ್ನು ಸಾಗಾಣಿಕೆ ಮಾಡುವಂತೆ ತಿಳಿಸಿದ್ದೆ ಅನ್ನುವುದು ಸರಿಯಲ್ಲ ನಮ್ಮ ಟ್ರಾಕ್ಟರ್‌ನಲ್ಲಿ ಬೀಟೆ ತುಂಡಿನ ಸಾಗಾಣಿಕೆ ನನಗೆ ಗೊತ್ತಿದ್ದೆ ನಡೆದಿದೆ ಅನ್ನುವುದು ಮತ್ತು ಈ ಬಗ್ಗೆ ನಾನು ಸುಳ್ಳು ಹೇಳುತ್ತಿದ್ದೇನೆ ಅನ್ನುವುದು ಸರಿಯಲ್ಲ.

ಅರ್ಜಿದಾರರು ದಿನಾಂಕ:10-4-2002ರಂದು ಶ್ರೀ ಬೆನಕರಾಜು ಇವರನ್ನು ಸಾಕ್ಷಿದಾರರನ್ನಾಗಿ ಹಾಜರು ಪಡಿಸಿ ಹೇಳಿಕೆ ದಾಖಲಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀಸವಾಲಿನಲ್ಲಿ ಬಸವಾಪಟ್ಟಣ ವಾಸಿ ಸಿದ್ದಪ್ಪ ನನಗೆ ಪರಿಚಯ ಅತನ ಟ್ರಾಕ್ಟರ್ ಮತ್ತು ಟ್ರೈಲರ್ ಇದ್ದು ಅದನ್ನು ಗೊಬ್ಬರ ಮಣ್ಣು ಹೇರಲು 8 ದಿವಸ ಮಟ್ಟಿಗೆ ತಂದಿದ್ದೆ ಸಿದ್ದಪ್ಪ ಟ್ರಾಕ್ಟರ್ ನ್ನು ವಾಪಾಸ್ಸು ಕಳುಹಿಸಲು ಪೋನ್ ಮಾಡಿದ್ದರಿಂದ ಟ್ರಾಕ್ಟರ್‌ನ್ನು ಚಾಲಕನ ಮುಖಾಂತರ ವಾಪಾಸ್ಸು ಕಳುಹಿಸಿಕೊಟ್ಟೆ ಎಂದು ಹೇಳಿಕೆ ನೀಡಿರುತ್ತಾರೆ.

ಎಪಿಪಿರವರು ಮಾಡಿದ ಪಾಟೀ ಸವಾಲಿನಲ್ಲಿ ಆ ದಿನ ಟ್ರಾಕ್ಟರ್ ವಾಪಾಸ್ಸು ಕಳುಹಿಸಿಕೊಟ್ಟಾಗ ಟ್ರಾಕ್ಟರ್ ನಲ್ಲಿ ಚಾಲಕ ಮಾತ್ರ ಇದ್ದ ನಾನು ದಿನ ಬಾಡಿಗೆ 800-00 ರಂತೆ ತೆಗೆದುಕೊಂಡು ಬಂದಿದ್ದೆ ಸಂಜೆ 5-30ರ ಸುಮಾರಿಗೆ ಟ್ರಾಕ್ಟರ್ ನಮ್ಮ ಊರಿನಿಂದ ಹೋಯಿತು. ಸದರಿ ಟ್ರಾಕ್ಟರ್ ನ್ನು ನಾನು ನನ್ನ ಕೆಲಸದ ಸಲುವಾಗಿ ತಂದಿದ್ದು ಸುಳ್ಳು ಎಂದರೆ ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ಮತ್ತು ವಕೀಲರ ವಾದವನ್ನು ಅಲಿಸಿದಾಗ ಈ ಕೆಳಗಿನ ಅಂಶಗಳು ಗಣನೆಗೆ ತೆಗೆದುಕೊಂಡಿರುತ್ತೇನೆ.

1. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 2599 2600ರಲ್ಲಿ ಬೀಟೆ ತುಂಡುಗಳು ಸಾಗಾಣಿಕೆ ಮಾಡಿರುವುದು ಅರ್ಜಿದಾರರು ಒಪ್ಪಿಕೊಂಡಿರುತ್ತಾರೆ.
2. ಅರ್ಜಿದಾರರು ವಾಹನದ ಚಾಲಕ ನಾಗರಾಜ ಎಂಬುವನಾಗಿದ್ದು ಅತ ಈಗ ಎಲ್ಲಿದ್ದಾನೆ ಎಂದು ಗೊತ್ತಿಲ್ಲ ಎಂದು ಹೇಳಿರುವುದು ನ್ಯಾಯಾಲಯವು ನಂಬುವಂತಹ ಸತ್ಯ ಅಗಿರುವುದಿಲ್ಲ. ಚಾಲಕನಿಗೆ ಸಂಬಂಧಿಸಿದವರು ಸಹ ಯಾರೂ ಇರುವುದಿಲ್ಲವೇ ಈ ಬಗ್ಗೆ ಅರ್ಜಿದಾರರು ನ್ಯಾಯಾಲಯದಲ್ಲಿ ಸುಳ್ಳು ಹೇಳಿಕೆ ನೀಡಿರುತ್ತಾರೆ.
3. ಅರ್ಜಿದಾರರು ವಾಹನದ ಚಾಲಕನ ಮೇಲೆ ಪೋಲೀಸ್ ಇಲಾಖೆಯಲ್ಲಿ ಯಾವುದೇ ಫಿರ್ಯಾಧಿಯನ್ನು ನೀಡಿರುವುದು ಕಂಡು ಬಂದಿಲ್ಲ ಹಾಗೂ ಅವರ ಅರ್ಜಿಯಲ್ಲಿ ಹಾಗೂ ಹೇಳಿಕೆಯಲ್ಲೂ ಸಹ ಈ ಬಗ್ಗೆ ತಿಳಿಸಿರುವುದಿಲ್ಲ.

4. ಅರ್ಜಿದಾರರು ವಕೀಲರ ಮುಖಾಂತರ ಅರಣ್ಯ ಕಾಯ್ದೆ 71(ಬಿ)ಗೆ ಸಂಬಂಧಿಸಿದಂತೆ ನೀಡಿದ ಸಮಜಾಯಿಸಿಯಲ್ಲಿ ಬಾಡಿಗೆ ಕಳುಹಿಸಿದ ಟ್ರಾಕ್ಟರ್‌ನ್ನು ಹಿಂದಿರುಗಿಸುವ ದಿನಾಂಕಗಳನ್ನು ನಮೂದಿಸಿದ್ದು ಸದರಿ ದಿನಾಂಕಗಳನ್ನು ತಿದ್ದಿರುವುದು ಕಂಡು ಬರುತ್ತದೆ. ಇದರಿಂದ ಅರ್ಜಿದಾರರ ಅನುಕೂಲಕ್ಕೆ ತಕ್ಕಂತೆ ಅರ್ಜಿ ಸಲ್ಲಿಸಿರುವುದು ತಿಳಿದು ಬರುತ್ತದೆ.

5. ಈ ಪ್ರಕರಣದಲ್ಲಿ ವಾಹನವನ್ನು ಬಾಡಿಗೆ ಪಡೆದ ವ್ಯಕ್ತಿಯು ವಾಹನವನ್ನು ಯಾವ ದಿನಾಂಕದಂದು ಬಾಡಿಗೆ ಅಧಾರದ ಮೇಲೆ ತೆಗೆದುಕೊಂಡು ಬಂದೆ ಮತ್ತು ಯಾವ ದಿನಾಂಕ ವಾಪಾಸ್ಸು ನೀಡಿದೆ ಎಂದು ಹೇಳಿಕೆ ನೀಡಿರುವುದಿಲ್ಲ.

6. ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿಯಿಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯವು ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಸಾಗುವಾನಿ ತುಂಡುಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ಮುಂಜಾಗ್ರತೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಬಿ)(2) ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಅವರುಗಳ ಜವಾಬ್ದಾರಿಯಾಗಿರುತ್ತದೆ.

”Without prejudice to the provisions of sub-section (1), no order confiscating any tool,rope, chain, boat, vehicle or cattle shall be made under section 71A if the owner of the tool,rope,chain,boat,vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool,rope,chain,boat,vehicle or cattle and that each of them had taken all reasonable and necessary precautions against such use.”

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿರುವ ವಿಚಾರವು ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಒಂದು ಕಟ್ಟು ಕತೆ ಎಂದು ಹಾಗೂ ವಾಹನದಲ್ಲಿ ಸಾಗುವಾನಿ ತುಂಡುಗಳು ಹಾಗೂ ಸೌದೆಯ ಅಕ್ರಮ ಸಾಗಾಣಿಕೆ ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಮೊದಲನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು ಎರಡನೇ ಹಾಗೂ 3ನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ:4:**

ದಿನಾಂಕ:29–4–99ರಂದು ಟ್ರಾಕ್ಟರ್ ಮತ್ತು ಟ್ರೈಲರ್ ನಂ ಕೆಎ 14 2599–2600ರಲ್ಲಿ ಅಕ್ರಮವಾಗಿ ಬೀಟೆ ತುಂಡುಗಳು 3=0.301 ಎಂ3ನ್ನು ಚನ್ನಗಿರಿ ವಲಯದ ಜೋಳ್‌ದಾಳ್ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ದ್ಯಾಮಣ್ಣನಕೆರೆ ಬೀಟಿನ ದಾನವಾಡಿ ಕ್ರಾಸ್ ಬಳಿ ವಶಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ 37/99–2000ನ್ನು ದಾಖಲು ಮಾಡಿರುತ್ತಾರೆ.

ಕರ್ನಾಟಕ ಅರಣ್ಯ ಕಾಯ್ದೆ 1969 ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸೊತ್ತೆಂದು ಭಾವಿಸಬೇಕಾಗಿರುತ್ತದೆ. ಅಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತು ಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

“ When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused. “

**104 A. Restrictions on trade and transport of black wood or Bite trees and timber thereof – No person other than –**

1)the State Government ; or

2)the officers of the State Government not below the rank of a Divisional Forest Officer, authorised in writing in this behalf,

shall purchase or transport any blackwood or bite tree (Dalbergia Latifolia) or timber thereof:

(2) No person shall sell or otherwise dispose of any such tree or timber to any person other than the State Government or the aforesaid officers.

(8) Any person contravening the provisions of this section or any rule made thereunder shall, on conviction, be punishable with imprisonment for a term which may extend to [ five years] and with fine which may extend to [ ten thousand rupees.]

ಈ ಪ್ರಕರಣದಲ್ಲಿ ಅರ್ಜಿದಾರರು ವಾಹನದ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ನಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರು ಪಡಿಸಿರುವುದಿಲ್ಲ ಅದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾಗುವಾನಿ ಬೀಟೆ ತುಂಡುಗಳು 3=0.301ಎಂ3ನ್ನು ಅರಣ್ಯ ಕಾಯ್ದೆ 1963 ಕಲಂ 80ರಂತೆ ಸರ್ಕಾರಿ ಸ್ವತ್ತೆಂದು ರುಜುವಾತಾಗಿರುತ್ತದೆ.

**ಅಂಶ:5**

ಅರ್ಜಿದಾರರಿಗೆ ಸೇರಿದ ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14 2599–2600ನ್ನು ಸರ್ಕಾರದ ಸೊತ್ತಾದ ಬೀಟೆ ತುಂಡುಗಳು 3=0.301ಎಂ3ನ್ನು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು ವಾಹನದ ಮಾಲೀಕರು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಭಾಗಿಯಾಗಿದ್ದಾರೆಂಬುದು ಸಾಕ್ಷ್ಯಧಾರಗಳಿಂದ ರುಜುವಾತಾಗಿರುತ್ತದೆ. ಫಿರ್ಯಾಧಿದಾರರು ಮಾಲುಗಳ ಸಮೇತ ವಾಹನ ಅಮಾನತ್ತು ಪಡಿಸಿದ್ದು ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರಗಳನ್ನು ಅವರು ನೀಡಿರುತ್ತಾರೆ. ಅರ್ಜಿದಾರರು ತಾನು ಮಾಡದೇ ಇರುವ ಅಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಧಾರಗಳನ್ನು ಹಾಜರು ಪಡಿಸದ ಕಾರಣ ಅರ್ಜಿದಾರರ ವಾಹನ ಅಕ್ರಮ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಅದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಅದ್ದರಿಂದ ಅಂಶ–5ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ಪ್ರಾಧಿಕಾರಕ್ಕೆ ಹಾಜರು ಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿ1ರ ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಪ್ರಕರಣದ ಮಹಜರ್ ನಿಶಾನೆ ಪಿ1ರ ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿಗಳಾದ ಪಿಡಬ್ಲ್ಯೂ 1 ಮತ್ತು ಪಿಡಬ್ಲ್ಯೂ2ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ ಬೀಟೆ ತುಂಡುಗಳು 3=0.301ಎಂ3ನ್ನು ಸಾಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರು ಪಡಿಸಿದ ದಾಖಲಾತಿಗಳು ಸಾಕ್ಷ್ಯಧಾರಗಳು ಮತ್ತು ವಾದ ವಿವಾದಗಳಿಂದ ವಾಹನದ ಮಾಲೀಕರಾಗಲೀ ಇಲ್ಲವೇ ವಾಹನ ಉಸ್ತುವಾರಿದಾರರಾಗಲೀ ವಾಹನವು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿಯಾಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೆ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಬೀಟೆ ಸಾಗುವಾನಿ ತುಂಡುಗಳು ಅರಣ್ಯ ಕಾಯ್ದೆ 1963 ನಿಯಮ 62,71ಎ 104ಎ ಹಾಗೂ ರೂಲ್ 1969 ಸೆಕ್ಷನ್ 144 ಮತ್ತು 165ರ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಧಾರಗಳನ್ನು ಮತ್ತು ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎ. ರಾಧಾದೇವಿ, ಭಾ.ಅ.ಸೇ, ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಅದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ ಕೆಎ 14

2599–2600(ಇಂಜಿನ್ ನಂ.ಎಚಿಡಿ 1906, ಛಾಸೀಸ್ ನಂ. ಎಂಡಿ 1906) ಹಾಗೂ ಬೀಟೆ ತುಂಡುಗಳು 3=0.301 ಎಂ3ನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ಅದೇಶ ಹೊರಡಿಸಿರುತ್ತೇನೆ.

ಈ ಅದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಅದೇಶ ಹೊರಡಿಸಿದ 30 ದಿವಸದೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಅದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಅದೇಶಿಸಿದೆ.

ಈ ಅದೇಶವನ್ನು ದಿನಾಂಕ:22–3–2006ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎ. ರಾಧಾದೇವಿ**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 816

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ದಕ್ಷಿಣ ಕನ್ನಡ ಉಪವಿಭಾಗ-2, ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 - ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ / ಎಸ್‌ಆರ್-14 / 2006(F), ದಿನಾಂಕ: 17ನೇ ಏಪ್ರಿಲ್ 2006**

**ಅರ್ಜಿದಾರರು :**
1) ಶ್ರೀಮತಿ ಸಕೀನಾಬಿ
w/o ಲೇಟ್ ಅಬ್ದುಲ್ ಸಾಹೇಬ್,
2) ಶೇಖ್ ಫಕೀರ್ ಸಾಹೇಬ್
S/o ಲೇಟ್ ಇಬ್ರಾಹಿಂ ಸಾಹೇಬ್,
3) ಶ್ರೀಮತಿ ಫಾತೀಮಾಬಿ
w/o ಶೇಖ್ ಫಕೀರ್ ಸಾಹೇಬ್,
4) ಜೀನತ್, D/o ಶೇಖ್ ಫಕೀರ್ ಸಾಹೇಬ್,
5) ಸಿದ್ದೀಕ್ S/o ಲೇಟ್ ಅಬ್ದುಲ್ ಸಾಹೇಬ್ (9 ವರ್ಷ)
6) ನಸೀಮ ಬಾನು D/o ಲೇಟ್ ಅಬ್ದುಲ್ ಸಾಹೇಬ್ (7 ವರ್ಷ),
7) ಅಬ್ದುಲ್ ಸಮದ್ S/o ಲೇಟ್ ಅಬ್ದುಲ್ ಸಾಹೇಬ್ (4 ವರ್ಷ)
ವಾಸ: ಕುತ್ತೋಡಿ ಹೌಸ್, ಬಡಕಜೆಕಾರು ಗ್ರಾಮ, ಬಂಟ್ವಾಳ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು :**
1) ಸುಧಾಕರಶೆಟ್ಟಿ
S/o ವಿಠಲಶೆಟ್ಟಿ
R/o ಗುತ್ತಿಗೆಹೌಸ್, ಕಣ್ಣೂರು,
ಪಟೇಲ್, ಮಂಗಳೂರು ತಾಲ್ಲೂಕು.
2) ದ. ಮ್ಯಾನೇಜರ್,
ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ.
ಸಾಲ್ಡಾನಕಟ್ಟಡ, ಬಲ್ಮಠ ರೋಡ್,
ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸಕೀನಾಬಿ ಇವರು ತಮ್ಮ ಮಗನಾದ : ಗಂಡನಾದ ಶ್ರೀ ಅಬ್ದುಲ್ ಸಾಹೇಬ್ @ ಅಬ್ದುಲ್ ಅಜೀಜ್, ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 26.12.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪ ವಿಭಾಗ-2, ಮಂಗಳೂರು.

ಪಿ.ಆರ್. 819

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 474 / 2005–06 / 87, ದಿನಾಂಕ: 31ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಗಸವಳ್ಳಿ, ಶಿವಮೊಗ್ಗ ತಾ: ಇದರ ಪುನಃಶ್ಚೇತನದ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 25 / 2005–06 / ದಿನಾಂಕ: 25–1–2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ: ಎಆರ್–24 / ಸಮಾಪನೆ / ಸಿಆರ್–9 / 2005–06, ದಿನಾಂಕ: 29–3–2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಗಸವಳ್ಳಿ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. 26299/99–2000 ದಿನಾಂಕ: 28–3–2000ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ–1 ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 3–2–2006 ರಂದು ಪ್ರಭಾರ ವಹಿಸಿಕೊಂಡು ಈ ಸಂಘದ ಸದಸ್ಯರು ಹಾಗೂ ಹಿಂದಿನ ಆಡಳಿತ ಮಂಡಳಿಯ ನಿರ್ದೇಶಕರುಗಳು ಸಮಾಪನೆಯಿಂದ ಸದಸ್ಯರಿಗೆ ತೊಂದರೆಯಾಗಿದ್ದು, ತುಂಬಾ ಕಷ್ಟವನ್ನು ಅನುಭವಿಸಲಾಗುತ್ತಿದೆ. ಅಲ್ಲದೆ ಸಂಘದಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಅನುಕೂಲತೆ ಇದ್ದು ಪುನಃಶ್ಚೇತನಕ್ಕಾಗಿ ಮನವಿ ಮಾಡಿಕೊಂಡಿರುತ್ತಾರೆ ಹಾಗೂ ದಿನಾಂಕ: 13–3–2006 ರಂದು ಸಮಾಪನಾಧಿಕಾರಿಯವರು ಸಭೆ ನಡೆಸಿ ಶಿವಮೊಗ್ಗ ಹಾಲು ಒಕ್ಕೂಟದ ಅಭಿಪ್ರಾಯದ ಮೇರೆಗೆ ಪುನಃಶ್ಚೇತನಕ್ಕಾಗಿ ಇಲಾಖೆ ಅಧಿಕಾರಿಯವರನ್ನು ಮನವಿ ಮಾಡಿಕೊಳ್ಳಲು ತೀರ್ಮಾನಿಸಿರುತ್ತಾರೆ. ಈ ಮನವಿಯ ಆಧಾರಿತವಾಗಿ ಉಲ್ಲೇಖ (2)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗರವರು ಗ್ರಾಮಸ್ಥರ ಕೋರಿಕೆಯ ಮೇರೆಗೆ ಪುನಃಶ್ಚೇತನಕ್ಕಾಗಿ ಶಿಫಾರಸ್ ಮಾಡಿರುತ್ತಾರೆ ಹಾಗೂ ಸಮಾಪನಾಧಿಕಾರಿಯವರು ದಿನಾಂಕ: 13–03–2006 ರಂದು ಸಭೆಯ ನಡೆಸಿ ಪುನಃಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ. ಆದಕಾರಣ ಈ ಸಂಘ ಅಸ್ತಿತ್ವದಲ್ಲಿ ಮುಂದುವರೆಯಬೇಕೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಗಸವಳ್ಳಿ, ಶಿವಮೊಗ್ಗ ತಾ: ಇದರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಆದೇಶಿಸಿರುತ್ತೇನೆ.

1) ಷೇರು ಬಂಡವಾಳವನ್ನು 3 ವರ್ಷಗಳಲ್ಲಿ ಹೆಚ್ಚಿಸತಕ್ಕದ್ದು.
2) ಈ ಸಂಘದ ಲೆಕ್ಕ ಪತ್ರಗಳನ್ನು ತಹಲ್ ವರೆಗೆ ಆಡಿಟ್ ಮಾಡಿಸುವುದು.
3) ಈ ಸಂಘದ ಸಿಬ್ಬಂದಿಯವರ ವೇತನ ಹಾಗೂ ಬಲವೃಂದವನ್ನು ಇಲಾಖೆಯಿಂದ ಅನುಮತಿ ಪಡೆಯುವುದು.
4) ಕಾರ್ಯವ್ಯಾಪ್ತಿಯ ಅರ್ಹರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.
5) ಪುನಃಶ್ಚೇತನಗೊಳಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಆಡಳಿತ ಮಂಡಳಿಯನ್ನು ರಚಿಸಿ ಸಂಘದ ಕಾರ್ಯಾಚರಣೆಯನ್ನು ಪ್ರಾರಂಭಿಸುವುದು ಹಾಗೂ ಪ್ರತಿ ತ್ರೈಮಾಸಿಕಕ್ಕೆ ಸಾಧಿಸಿದ ಪ್ರಗತಿ ವರದಿಯನ್ನು ಇಲಾಖೆಗೆ ಸಲ್ಲಿಸತಕ್ಕದ್ದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿಯ ಪುನರ್ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ.

ಪಿ.ಆರ್. 779

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 481 / 2005–06 / 89, ದಿನಾಂಕ: 31ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಲಕ್ಷ್ಮೀಪುರ, ಭದ್ರಾವತಿ ತಾ: ಇದರ ಪುನಃಶ್ಚೇತನದ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 481/ 2005–06 / ದಿನಾಂಕ: 26–9–2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ: ಎಆರ್–24 / ಸಮಾಪನೆ / ಸಿಆರ್–77 / 2005–06, ದಿನಾಂಕ: 15–3–2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಲಕ್ಷ್ಮೀಪುರ, ಭದ್ರಾವತಿ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. 18817/93–94 ದಿನಾಂಕ: 14–5–1993ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 15–12–2005 ರಂದು ಪ್ರಭಾರ ವಹಿಸಿಕೊಂಡು ಈ ಸಂಘದ ಸದಸ್ಯರು ಹಾಗೂ ಹಿಂದಿನ ಆಡಳಿತ ಮಂಡಳಿಯ ನಿರ್ದೇಶಕರುಗಳು ಸಮಾಪನೆಯಿಂದ ಸದಸ್ಯರಿಗೆ ತೊಂದರೆಯಾಗಿದ್ದು, ತುಂಬಾ ಕಷ್ಟವನ್ನು ಅನುಭವಿಸಲಾಗುತ್ತಿದೆ. ಅಲ್ಲದೆ ಸಂಘದಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಅನುಕೂಲತೆ ಇದ್ದು ಪುನಃಶ್ಚೇತನಕ್ಕಾಗಿ ಮನವಿ ಮಾಡಿಕೊಂಡಿರುತ್ತಾರೆ ಹಾಗೂ ದಿನಾಂಕ: 14–3–2006 ರಂದು ಸಮಾಪನಾಧಿಕಾರಿಯವರು ಸಭೆ ನಡೆಸಿ ಶಿವಮೊಗ್ಗ ಹಾಲು ಒಕ್ಕೂಟದ ಅಭಿಪ್ರಾಯದ ಮೇರೆಗೆ ಪುನಃಶ್ಚೇತನಕ್ಕಾಗಿ ಇಲಾಖೆ ಅಧಿಕಾರಿಯವರನ್ನು ಮನವಿ ಮಾಡಿಕೊಳ್ಳಲು ತೀರ್ಮಾನಿಸಿರುತ್ತಾರೆ. ಈ ಮನವಿಯ ಆಧಾರಿತವಾಗಿ ಉಲ್ಲೇಖ (2)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗರವರು ಗ್ರಾಮಸ್ಥರ ಕೋರಿಕೆಯ ಮೇರೆಗೆ ಪುನಃಶ್ಚೇತನಕ್ಕಾಗಿ ಶಿಫಾರಸ್ ಮಾಡಿರುತ್ತಾರೆ ಹಾಗೂ ಸಮಾಪನಾಧಿಕಾರಿಯವರು ದಿನಾಂಕ: 14–03–2006 ರಂದು ಸಭೆಯ ನಡೆಸಿ ಪುನಃಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ. ಆದಕಾರಣ ಈ ಸಂಘ ಅಸ್ತಿತ್ವದಲ್ಲಿ ಮುಂದುವರೆಯಬೇಕೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಲಕ್ಷ್ಮೀಪುರ, ಭದ್ರಾವತಿ ತಾ: ಇದರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಆದೇಶಿಸಿರುತ್ತೇನೆ.

1) ಷೇರು ಬಂಡವಾಳವನ್ನು 3 ವರ್ಷಗಳಲ್ಲಿ ಹೆಚ್ಚಿಸತಕ್ಕದ್ದು.
2) ಈ ಸಂಘದ ಲೆಕ್ಕ ಪತ್ರಗಳನ್ನು ತಹಲ್ ವರೆಗೆ ಆಡಿಟ್ ಮಾಡಿಸುವುದು.
3) ಈ ಸಂಘದ ಸಿಬ್ಬಂದಿಯವರ ವೇತನ ಹಾಗೂ ಬಲವೃಂದವನ್ನು ಇಲಾಖೆಯಿಂದ ಅನುಮತಿ ಪಡೆಯುವುದು.
4) ಕಾರ್ಯವ್ಯಾಪ್ತಿಯ ಅರ್ಹರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.
5) ಪುನಃಶ್ಚೇತನಗೊಳಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಆಡಳಿತ ಮಂಡಳಿಯನ್ನು ರಚಿಸಿ ಸಂಘದ ಕಾರ್ಯಾಚರಣೆಯನ್ನು ಪ್ರಾರಂಭಿಸುವುದು ಹಾಗೂ ಪ್ರತಿ ತ್ರೈಮಾಸಿಕಕ್ಕೆ ಸಾಧಿಸಿದ ಪ್ರಗತಿ ವರದಿಯನ್ನು ಇಲಾಖೆಗೆ ಸಲ್ಲಿಸತಕ್ಕದ್ದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿಯ ಪುನರ್ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ.

ಪಿ.ಆರ್. 781

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 479 / 2005–06 / 85, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಾರ್‍ನಹಳ್ಳಿ, ಶಿವಮೊಗ್ಗ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 27/ 2005–06 / ದಿನಾಂಕ: 31–05–2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ: ಎಆರ್–24 / ಸಮಾಪನೆ / 2112 / 2005–06, ದಿನಾಂಕ: 16–3–2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಾರ್‍ನಹಳ್ಳಿ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. ಸಸೊಸನಿ–24 / ನೊಂದಣಿ / 15422 / 1988–89 ದಿನಾಂಕ: 04–07–1988ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ, ಶಿವಮೊಗ್ಗ ಹಾಲು ಒಕ್ಕೂಟ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 18–09–2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ಥಿ ಇಲ್ಲವೆಂದು ವರದಿ ಮಾಡಿ ದಿನಾಂಕ: 29–01–2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಈ ಸಂಘದಲ್ಲಿ ಸದಸ್ಯತ್ವ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ–ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಾರ್‍ನಹಳ್ಳಿ, ಶಿವಮೊಗ್ಗ ತಾ: ಇದರ ನೊಂದಣಿ ನಂ. ಸಸಂಸನಿ–24 / ನೊಂದಣಿ / 15422 / 1988–89 ದಿನಾಂಕ: 04.07.1988 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29–03–2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 780

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 489 / 2005–06 / 82, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ವ್ಯವಸಾಯ ಇಲಾಖಾ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 18/ 2005–06 / ದಿನಾಂಕ: 27–05–2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ: ಎಆರ್–24 / ಸಮಾಪನೆ / 78 / 2005–06, ದಿನಾಂಕ: 21–03–2006.

ವ್ಯವಸಾಯ ಇಲಾಖಾ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ–24/ನೊಂದಣಿ/2205/1993–94 ದಿನಾಂಕ: 01–03–1994 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ–1, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 03–06–2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 20–02–2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ–ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ವ್ಯವಸಾಯ ಇಲಾಖಾ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಇದರ ನೊಂದಣಿ ನಂ. ಸಸಂಸನಿ–24 / ನೊಂದಣಿ / 2205 / 1993–94 ದಿನಾಂಕ: 1.03.1994 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29–03–2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 782

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 499 / 2005-06 / 80, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ನೇರಲಗಿ, ಸೊರಬ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 36/ 2003-04 / ದಿನಾಂಕ: 23-01-2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್-25 / ಸಮಾಪನೆ / 153 / 2005-06, ದಿನಾಂಕ: 27-03-2006.

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ನೇರಲಗಿ, ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ-25 / ನೊಂದಣಿ/20148/1993-94 ದಿನಾಂಕ: 13-05-1994 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ, ಶಿಮೂಲ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 18-08-2004 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 28-03-2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21-11-2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ನೇರಲಗಿ, ಸೊರಬ ತಾ: ಇದರ ನೊಂದಣಿ ನಂ. ಸಸಂಸನಿ-25 / ನೊಂದಣಿ / 20148 / 1993-94 ದಿನಾಂಕ: 13.05.1994 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29-03-2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 783

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 500 / 2005-06 / 81, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಮನವಳ್ಳಿ, ಸೊರಬ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 37/ 2003-04 / ದಿನಾಂಕ: 13-02-2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್-25 / ಸಮಾಪನೆ / 154 / 2005-06, ದಿನಾಂಕ: 27-03-2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಮನವಳ್ಳಿ, ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ-25 / ನೊಂದಣಿ/ 18538/ 1991-92 ದಿನಾಂಕ: 12-03-1992 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ, ಶಿಮೂಲ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 09-05-2004 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 16-03-2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21-11-2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಮನವಳ್ಳಿ, ಸೊರಬ ತಾ: ಇದರ ನೊಂದಣಿ ನಂ. ಸಸಂಸನಿ-25 / ನೊಂದಣಿ / 18538 / 1991-92 ದಿನಾಂಕ: 12.03.1992 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29-03-2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,

ಪಿ.ಆರ್. 784 ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 502 / 2005–06 / 83, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ದಕ್ಷಿಣ ರೈಲ್ವೆ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 19/ 2005–06 / ದಿನಾಂಕ: 27–05–2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ: ಎಆರ್–24 / ಸಮಾಪನೆ / 81 / 2005–06, ದಿನಾಂಕ: 27–03–2006.

ದಕ್ಷಿಣ ರೈಲ್ವೆ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ–24 / ನೊಂದಣಿ / 1345 / 1963–64 ದಿನಾಂಕ: 10–08–1964 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ–1, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿ: 03–06–2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 24–03–2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ–ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ದಕ್ಷಿಣ ರೈಲ್ವೆ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಇದರ ನೊಂದಣಿ ನಂ. ಸಸಂಸನಿ–24 / ನೊಂದಣಿ / 1345 / 1963–64 ದಿನಾಂಕ: 10.02.1964 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29–03–2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 785

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 504 / 2005-06 / 79, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತ್ರಿಣಿವೆ (ನಾಗರಕೊಡಿಗೆ) ಹೊಸನಗರ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 24/ 2005-06 / ದಿನಾಂಕ: 26-07-2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್-25 / ಸಮಾಪನೆ / 157 / 2005-06, ದಿನಾಂಕ: 28-03-2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ತ್ರಿಣಿವೆ (ನಾಗರಕೊಡಿಗೆ) ಹೊಸನಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ-25 / ನೊಂದಣಿ/ 16300 / 1989-90 ದಿನಾಂಕ: 24-03-1990 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸನಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 23-05-2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ವರದಿ ಮಾಡಿದ್ದು ಮತ್ತು ಸ್ಥಿರಾಸ್ಥಿಯನ್ನು ವ್ಯ.ಸೇ.ಸ ಬ್ಯಾಂಕ್ ತ್ರಿಣಿವೆ (ನಾಗರಕೊಡಿಗೆ) ಈ ಸಂಘಕ್ಕೆ ವರ್ಗಾವಣೆಗೆ ಅನುಮತಿ ಪಡೆದು ವರ್ಗಾವಣೆ ಮಾಡಿರುತ್ತಾರೆ. ದಿನಾಂಕ: 13-03-2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ ಮತ್ತು ಸಂಘದ ಲೆಕ್ಕಪತ್ರಗಳನ್ನು ದಿನಾಂಕ: 13-3-2006 ರವರೆಗೆ ಆಡಿಟ್ ಮಾಡಿಸಿದ್ದು ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21-11-2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತ್ರಿಣಿವೆ (ನಾಗರಕೊಡಿಗೆ) ಹೊಸನಗರ ತಾ: ಇದರ ನೊಂದಣಿ ನಂ. ಸಸಂಸನಿ-25 / ನೊಂದಣಿ / 16300 / 1989-90 ದಿನಾಂಕ: 24.03.1990 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29-03-2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 786

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 505 / 2005-06 / 77, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಟ್ಟಿನಹೊಳೆ, ಹೊಸನಗರ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 432/ 2005-06 / ದಿನಾಂಕ: 27-02-2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್- 25 / ಸಮಾಪನೆ / 155 / 2005-06, ದಿನಾಂಕ: 28-03-2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಟ್ಟಿನಹೊಳೆ, ಹೊಸನಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ-25 / ನೊಂದಣಿ/ 29542 / 2000-01 ದಿನಾಂಕ: 12-03-2001 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸನಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 27-02-2006 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 25-03-2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ ಮತ್ತು ಸಂಘದ ಲೆಕ್ಕಪತ್ರಗಳನ್ನು ದಿನಾಂಕ: 25-3-2006 ರವರೆಗೆ ಆಡಿಟ್ ಮಾಡಿಸಿದ್ದು ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್ಎಂ / 2000 / ದಿನಾಂಕ: 21-11-2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಟ್ಟಿನಹೊಳೆ, ಹೊಸನಗರ ತಾ: ಇದರ ನೊಂದಣಿ ನಂ. ಸಸಂಸನಿ-25 / ನೊಂದಣಿ / 29542 / 2000-01 ದಿನಾಂಕ: 12.03.2001 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29-03-2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 787

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 506 / 2005–06 / 78, ದಿನಾಂಕ: 29ನೇ ಮಾರ್ಚ್ 2006**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಳಿಕಾಪುರ, ಹೊಸನಗರ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 24/ 2005–06 / ದಿನಾಂಕ: 26–07–2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್–25 / ಸಮಾಪನೆ / 156 / 2005–06, ದಿನಾಂಕ: 28–03–2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಳಿಕಾಪುರ, ಹೊಸನಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ–25 / ನೊಂದಣಿ/ 16301 / 1989–90 ದಿನಾಂಕ: 24–03–1990 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸನಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 26–07–2004 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 25–03–2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೊಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ ಮತ್ತು ಸಂಘದ ಲೆಕ್ಕಪತ್ರಗಳನ್ನು ದಿನಾಂಕ: 25–3–2006 ರವರೆಗೆ ಆಡಿಟ್ ಮಾಡಿಸಿದ್ದು ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ–ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ / 69 / ಸಿಎಲ್ಎಂ / 2000 / ದಿನಾಂಕ: 21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಳಿಕಾಪುರ, ಹೊಸನಗರ ತಾ: ಇದರ ನೊಂದಣಿ ನಂ. ಸಸಂಸನಿ–25 / ನೊಂದಣಿ / 16301 / 1989–90 ದಿನಾಂಕ: 24.03.1990 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 29–03–2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 788

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

ಆದೇಶ ಸಂಖ್ಯೆ: ಡಿಸಿಎಫ್-ಎ6/71(ಎ) ಸಿಆರ್-1/05-06/6080, ದಿನಾಂಕ: 27ನೇ ಫೆಬ್ರವರಿ 2006

**ವಿಷಯ** : ಅಕ್ರಮವಾಗಿ ಶ್ರೀಗಂಧ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ಮಹೇಂದ್ರ ಆರ್ಮಡಾ ಜೀಪ್ ಸಂಖ್ಯೆ: ಕೆಎ-02-ಎನ್-5709 ಮತ್ತು ಅದರಲ್ಲಿ ಸಾಗಿಸುತ್ತಿದ್ದ 102 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ** :
1 ಪೋಲೀಸ್ ಸಬ್ ಇನ್‌ಸ್ಪೆಕ್ಟರ್, ಹಿರಿಯೂರು ಪೋಲೀಸ್ ಠಾಣೆ, ಹಿರಿಯೂರು ಇವರ ಪತ್ರ ಸಂಖ್ಯೆ ಸಿಸಿಡಿ-92/05 ದಿನಾಂಕ: 10-8-2005.
2 ಈ ಪ್ರಾಧಿಕಾರದಿಂದ ಜಾರಿ ಮಾಡಿದ ಷೋಕಾಸ್ ನೋಟೀಸ್ ದಿನಾಂಕ: 23-9-2005
3 ಸಂಬಂಧಿಸಿದವರಿಗೆ ಜಾರಿ ಮಾಡಲು ಹೊರಡಿಸಿದ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿತ ಪುಟ ಸಂಖ್ಯೆ 182(ಭಾಗ-3) ದಿನಾಂಕ: 12-1-2006.

**ಪ್ರಸ್ತಾವನೆ**

ಪೋಲೀಸ್ ಸಬ್ ಇನ್‌ಸ್ಪೆಕ್ಟರ್, ಹಿರಿಯೂರು ಪೋಲೀಸ್ ಠಾಣೆ, ಹಿರಿಯೂರು ಇವರು ದಿನಾಂಕ: 22-3-2003 ರಂದು ಹಿರಿಯೂರು ತಾ: ಮೇಟಿಕುರ್ಕೆ ಸಮೀಪದ ಫಾರೆಸ್ಟ್ ಐ.ಬಿ ಮುಂಭಾಗದ ಎನ್.ಹೆಚ್ -4 ರಸ್ತೆಯಲ್ಲಿ ಕೆಎ-02-ಎನ್-5709ರ ಮಹೇಂದ್ರ ಆರ್ಮಡಾ ಜೀಪ್ ನಲ್ಲಿ 7 ಚಿಕ್ಕ ಚಿಕ್ಕ ಚೀಲಗಳಲ್ಲಿ ಅಂದಾಜು ತೂಕ 102 ಕೆ.ಜಿ. ಶ್ರೀಗಂಧದ ಚಕ್ಕೆಗಳನ್ನು ತುಂಬಿ ಸಾಗಿಸುತ್ತಿದ್ದಾಗ ಪತ್ತೆ ಮಾಡಿ ಮುಂದಿನ ಕ್ರಮ ಜರುಗಿಸಲು ಹಿರಿಯೂರು ಠಾಣೆ ಮೊಕದ್ದಮೆ ಸಂಖ್ಯೆ: 148/03 ಕಲಂ 279 337, 304 (ಎ) ಐಪಿಸಿ ಯನ್ವಯ ಪ್ರಕರಣ ದಾಖಲಿಸಿ ವಾಹನವನ್ನು ಮತ್ತು ಶ್ರೀಗಂಧವನ್ನು ಅಮಾನತ್ತು ಪಡಿಸಿರುತ್ತಾರೆ. ರಾಜ್ಯ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣೆ ಮಾಡುವಾಗ ವಶಪಡಿಸಿಕೊಳ್ಳಲಾದ 102 ಕೆ.ಜಿ. ಶ್ರೀಗಂಧವನ್ನು ಮತ್ತು ಮಹೇಂದ್ರ ಆರ್ಮಡಾ ಜೀಪನ್ನು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71(ಎ) ರಡಿಯಲ್ಲಿ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

ಸದರಿ ಮಹೇಂದ್ರ ಆರ್ಮಡಾ ಜೀಪ್ ಸಂಖ್ಯೆ: ಕೆಎ-02-ಎನ್-5709 ನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರ ವಶದಲ್ಲಿ ಹಾಗೂ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಹಿರಿಯೂರು ಇವರ ವಶದಲ್ಲಿರಿಸಿಕೊಳ್ಳಲು ಈ ಪ್ರಾಧಿಕಾರವು ಆದೇಶಿಸಿದೆ.

ಸದರಿ ಪ್ರಕರಣದ ಪ್ರಥಮ ವರ್ತಮಾನ ಮಾಹಿತಿ ವರದಿ, ಸ್ಥಳ ಪಂಚನಾಮೆ, ಮಹೇಂದ್ರ & ಮಹೇಂದ್ರ ಕಂಪನಿಗೆ ಸೇರಿದ ಆರ್ಮಡ ವಾಹನದ ವಿಳಾಸದ ಬಗ್ಗೆ ಕಂಪನಿಯವರು ನೀಡಿರುವ ದಾಖಲೆಗಳು ಕರುಗಪಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಿಂದ ನೀಡಲಾದ ವಾಹನದ ನೊಂದಣಿಯ ವಿವರ ಇವುಗಳನ್ನು ಉಲ್ಲೇಖ (1) ರ ಪತ್ರದ ಮೂಲಕ ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುತ್ತಾರೆ.

ಕಳ್ಳ ಸಾಗಾಣಿಕೆಯಲ್ಲಿ ಬಳಸಲಾದ ಮಹೇಂದ್ರ ಆರ್ಮಡಾ ಜೀಪ್ ಸಂಖ್ಯೆ: ಕೆಎ-02-ಎನ್-5709ರ ನೊಂದಾಯಿತ ಮಾಲೀಕರಾದ ಶ್ರೀ ಜಾನ್ ಪಿ. ರಾಯ್ ತಂದೆ ಶ್ರೀ ಜಾನ್ ಪುಂಟಲಿತೇಕಟ್ಟಿಲ್ ಪೋಸ್ಟ್, ವಡಕಮತ್ತುಲ ವೆಸ್ಟ್, ಕರುಂಗಪಲ್ಲಿ, ಕೇರಳ ಇವರಿಗೆ ಈ ಪ್ರಾಧಿಕಾರದಿಂದ ವಾಹನ ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 102 ಕೆ.ಜಿ. ಶ್ರೀಗಂಧವನ್ನು ಏಕೆ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಸೂಕ್ತ ದಾಖಲೆಗಳೊಂದಿಗೆ ಅಹವಾಲು ಸಲ್ಲಿಸುವಂತೆ ಒಂದು ವೇಳೆ ಅಹವಾಲು ಸಲ್ಲಿಸಲು ವಿಫಲರಾದಲ್ಲಿ ಪ್ರಕರಣವನ್ನು ನಿಮ್ಮ ಗೈರು ಹಾಜರಿಯಲ್ಲಿ ಏಕ ಪಕ್ಷೀಯವಾಗಿ ವಿಚಾರಣೆ ನಡೆಸುವುದಾಗಿ ತಿಳಿಸಿ 15 ದಿನಗಳ ಕಾಲಾವಕಾಶ ನೀಡಿ ಕಾರಣ ಕೇಳಿ ನೋಟೀಸನ್ನು ದಿನಾಂಕ: 23/30-9-2005 ರಂದು ನೊಂದಾಯಿತ ಸ್ವೀಕೃತಿ ಅಂಚೆ ಮೂಲಕ ಕಳುಹಿಸಲಾಗಿತ್ತು. ಸದರಿ ಲಕೋಟೆಯು **"Refused"** ಎಂಬ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ವಾಹನದ ಇನ್ನಿತರೆ ವಾರಸುದಾರರು ಇದ್ದ ಪಕ್ಷದಲ್ಲಿ ಈ ಪ್ರಾಧಿಕಾರದ ಮುಂದೆ ತಮ್ಮ ಅಹವಾಲುಗಳನ್ನು 15 ದಿನದೊಳಗೆ ಈ ಪ್ರಾಧಿಕಾರದ ಮುಂದೆ ಸಲ್ಲಿಸಲು ಅನುವಾಗುವಂತೆ ದಿನಾಂಕ: 7-11-2005 ರಲ್ಲಿ ಈ ಪ್ರಾಧಿಕಾರದಿಂದ ಕಳುಹಿಸಲಾದ ಪ್ರಕಟಣೆಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ರವರು ಕರ್ನಾಟಕ ರಾಜ್ಯ ಪತ್ರದ ಭಾಗ - 3 ರ ಪುಟ ಸಂಖ್ಯೆ: 182 ರಲ್ಲಿ ದಿನಾಂಕ: 12-1-2006 ರಂದು ಪ್ರಕಟಿಸಿರುತ್ತಾರೆ.

ಸದರಿ ಪ್ರಕಟಣೆಯಲ್ಲಿ ನೀಡಲಾದ 15 ದಿನಗಳ ಗಡುವು ಮುಕ್ತಾಯವಾದರೂ ಸಹ ಯಾವುದೇ ವ್ಯಕ್ತಿಯು ಅಹವಾಲನ್ನು ಈ ಪ್ರಾಧಿಕಾರದ ಮುಂದೆ ಸಲ್ಲಿಸದಿರುವ ಕಾರಣ ಈ ಪ್ರಾಧಿಕಾರವು ಏಕ ಪಕ್ಷೀಯವಾಗಿ ವಿಚಾರಣೆ ನಡೆಸಿ ಶ್ರೀಗಂಧದ ಅಕ್ರಮ ಸಾಗಾಣಿಕೆ ಖಚಿತವಾಗಿದ್ದು, ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಹೇಂದ್ರಾ ಆರ್ಮಡಾ ಜೀಪ್ ಹಾಗೂ 102 ಕೆ.ಜಿ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71(ಎ) (2) ರ ಮೇರೆಗೆ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ವಯ ಎಸ್. ಮುತ್ತಯ್ಯ, ಭಾ.ಅ.ಸೇ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ 71(ಎ) (2) ರ ಕಲಂನನ್ವಯ ಪ್ರಸ್ತುತ ಪ್ರಕರಣದಲ್ಲಿ ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಆರ್ಮಡಾ ಜೀಪ್ ಸಂಖ್ಯೆ: ಕೆಎ-02-ಎನ್-5709ನ್ನು ಮತ್ತು 102 ಕೇ.ಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮತ್ತು ಈ ವಾಹನ ಹಾಗೂ ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತಾಯವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 27-2-2006 ರಂದು ತೆರೆದ ಪ್ರಾಧಿಕಾರದಲ್ಲಿ ನನ್ನ ಹೆಸರು ಮತ್ತು ಮೊಹರಿನಡಿ ಹೊರಡಿಸಲಾಗಿದೆ.

| | |
|---|---|
| 1. ವಾಹನದ ಮಾದರಿ | ಮಹೇಂದ್ರ ಆರ್ಮಡಾ ಜೀಪ್ |
| 2. ನೋಂದಣಿ ಸಂಖ್ಯೆ | ಕೆಎ02-ಎನ್-5709 |
| 3. ಇಂಜಿನ್ ಸಂಖ್ಯೆ | **DV 25337** |
| 4. ಚಾಸಿ ಸಂಖ್ಯೆ | **ARMADA 2 EV DV 25337** |
| 5. ಶ್ರೀಗಂಧದ ಪ್ರಮಾಣ | 102 ಕೇ.ಜಿ. |

ಈ ಆದೇಶ ಹೊರಡಿಸಿದ 30 ದಿನದ ಒಳಗೆ ಯಾರೂ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ

ಪಿ.ಆರ್. 769 ಚಿತ್ರದುರ್ಗ ವಿಭಾಗ, ಚಿತ್ರದುರ್ಗ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

ಉಪಸ್ಥಿತರು : ಎಸ್. ಮುತ್ತಯ್ಯ, ಭಾಅಸೇ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| 1) ವಲಯ ಅರಣ್ಯಾಧಿಕಾರಿ<br>ಹಿರಿಯೂರು ವಲಯ<br>ಹಿರಿಯೂರು | | 1) ಶ್ರೀ ಸೈಯದ್ ಜಮಾಲ್ ಬಿನ್<br>ಎಸ್.ಎ. ರವೂಫ್, ಚೆನ್ನಗಿರಿ ತಾ:<br>ದಾವಣಗೆರೆ ಜಿಲ್ಲೆ.<br>2) ಶ್ರೀ ಎಂ.ಬಿ. ಯೂಸುಫ್ ಖಾನ್<br>ಬಿನ್ ಭಾಷಾ ಸಾಬ್, ಕೆಇಬಿ ರಸ್ತೆ,<br>ಚೆನ್ನಗಿರಿ ತಾ:, ದಾವಣಗೆರೆ ಜಿಲ್ಲೆ. |

**ವಾಹನದ ಮಾಲೀಕರು** : ಶ್ರೀ ಸೈಯದ್ ಆಸಿಫ್ ಅಹಮದ್, ಬಿನ್ ಲೇಟ್ ಎಸ್.ಎ. ರವೂಫ್‌ಸಾಬ್ ಸೈಯದ್ ಮೊಹಲ್ಲಾ, ಚನ್ನಗಿರಿ ಟೌನ್, ದಾವಣಗೆರೆ ಜಿಲ್ಲೆ.

**ಅರ್ಜಿದಾರರ ಪರ ವಕೀಲರು** : 1 ಶ್ರೀ ಬಿ.ಕೆ. ರಹಮತ್‌ವುಲ್ಲಾ, ವಕೀಲರು, ಚಿತ್ರದುರ್ಗ

2 ಶ್ರೀ ಎಸ್.ಎ. ರಿಜ್ವಾನ್ ವಕೀಲರು, ಚಿತ್ರದುರ್ಗ

**ಪ್ರಕರಣದ ಹಿನ್ನೆಲೆ** :

ಚುನಾವಣೆಗಳ ಹಿನ್ನೆಲೆಯಲ್ಲಿ ರಚಿಸಲಾದ ವಿಶೇಷ ಅಬಕಾರಿ ತಂಡದೊಂದಿಗೆ ಇದ್ದ ಅರಣ್ಯ ಇಲಾಖಾ ಸಿಬ್ಬಂದಿ ದಿನಾಂಕ 24-8-1999 ರಂದು ವಾಹನಗಳ ತಪಾಸಣೆ ಕಾರ್ಯವನ್ನು ಪಿ.ಡಿ.ಕೋಟೆ (ಧರ್ಮಪುರ) ಬಳಿ ನಿರ್ವಹಿಸುತ್ತಿದ್ದ ಸಮಯದಲ್ಲಿ ಬೆಳಗ್ಗೆ ಸುಮಾರು 8.00 ಗಂಟೆಯ ಸಮಯದಲ್ಲಿ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ಒಂದು ನಿಲ್ಲಿಸಲು ಸೂಚನೆ ನೀಡಿದರೂ ಸಹ ನಿಲ್ಲಿಸದೆ ವೇಗವನ್ನು ಹೆಚ್ಚಿಸಿಕೊಂಡು ಮುಂದಕ್ಕೆ ಹೋಗಿದ್ದರಿಂದ ಅನುಮಾನಗೊಂಡ ಚುನಾವಣಾ ವಿಶೇಷ ದಳವು ಅರಣ್ಯ ಇಲಾಖೆಯ ಜೀಪ್ ಸಂಖ್ಯೆ: ಕೆಎ-16-ಜಿ-111 ರಲ್ಲಿ ಬೆನ್ನಟ್ಟಿ 9 ಗಂಟೆ ಸುಮಾರಿಗೆ ಕಾರನ್ನು ತಡೆದು ನಿಲ್ಲಿಸಿದರು. ಸದರಿ ಅಂಬಾಸಿಡರ್ ಕಾರಿನ ನಂ. ಸಿಟಿವಿ-5656 ಆಗಿತ್ತು, ವಾಹನವನ್ನು ವಿವರವಾಗಿ ತಪಾಸಣೆ ಮಾಡಿದಾಗ ಅಂಬಾಸಿಡರ್ ಕಾರಿನ ಒಳಗಡೆ ಮತ್ತೊಂದು ನಂಬರ್ ಪ್ಲೇಟ್ ದೊರೆತಿದ್ದು ಅದರ ಮೇಲೆ ಸಿಟಿಇ-1581 ಎಂದು ಬರೆಯಲಾಗಿತ್ತು.

ತಪಾಸಣಾ ಸಮಯದಲ್ಲಿ ವಾಹನದಲ್ಲಿ 6 ಗೋಣಿ ಚೀಲಗಳು ಕಂಡು ಬಂದಿದ್ದು ಅದರ ಒಳಗೆ ಚಕ್ಕೆಗಳಿದ್ದ ಕಾರಣ ಅವುಗಳನ್ನು ಪರೀಕ್ಷಿಸಲಾಗಿ ಅವುಗಳು ಶ್ರೀಗಂಧದ ಚಕ್ಕೆಗಳು ಎಂದು ತಿಳಿದುಬಂದ ಕಾರಣ, ಕಾರಿನಲ್ಲಿದ್ದ ವ್ಯಕ್ತಿಗಳನ್ನು ಶ್ರೀಗಂಧವನ್ನು ಸಾಗಿಸಲು ಇಲಾಖೆ ಪರವಾನಿಗಿ ಇದೆಯೇ ಎಂದು ವಿಚಾರಿಸಲಾಗಿ, ಸದರಿ ವ್ಯಕ್ತಿಗಳು ಅಂತಹ ಯಾವುದೇ ದಾಖಲೆಗಳು ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಸದರಿ ವ್ಯಕ್ತಿಗಳ ಹೆಸರು ಇತ್ಯಾಧಿಗಳನ್ನು ವಿಚಾರಿಸಲಾಗಿ

(1) ಸೈಯದ್ ಜಮಾಲ್ ಬಿನ್ ಲೇಟ್ ಎಸ್.ಎ. ರವೂಫ್ ಸಾಬ್, ಚನ್ನಗಿರಿ ತಾ :

(2) ಎಂ.ಬಿ. ಯೂಸುಫ್ ಖಾನ್ ಬಿನ್ ಭಾಷಾ ಸಾಬ್, ಚನ್ನಗಿರಿ ಎಂದು ತಿಳಿದು ಬಂದಿರುತ್ತದೆ.

ಮೇಲ್ಕಂಡ ಆರೋಪಿಗಳನ್ನು ವಿಚಾರಿಸುತ್ತಿದ್ದ ಸಮಯದಲ್ಲಿ ಕಾರಿನಲ್ಲಿದ್ದ ಮತ್ತೊಬ್ಬ ವ್ಯಕ್ತಿ ಕಾರಿನಿಂದ ಧುಮುಕಿ ಪರಾರಿಯಾಗಿರುತ್ತಾನೆ. ಪರಾರಿಯಾದವನ ಬಗ್ಗೆ ಸಿಕ್ಕಿ ಬಿದ್ದ ಆರೋಪಿಗಳನ್ನು ವಿಚಾರಿಸಲಾಗಿ ಆತನ ಹೆಸರು ಶಮೀವುಲ್ಲಾ, ಚನ್ನಗಿರಿ ಎಂದು ತಿಳಿಸಿರುತ್ತಾರೆ.

ನಂತರ, ಪಂಚರ ಸಮಕ್ಷಮ **ಸಿಟಿವಿ–5656 (ಸಿಟಿಇ–1581)** ಅಂಬಾಸಿಡರ್ ಕಾರನ್ನು ಹಾಗೂ ಕಾರಿನಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಅಳತೆವಾರು ವಿಂಗಡಿಸಿ ದೊಡ್ಡ ತುಂಡುಗಳಿಗೆ 1 ರಿಂದ 35 ರವರೆಗೆ ಕೆಂಪು ಬಣ್ಣದಲ್ಲಿ ನಮೂದಿಸಿ, ಅರಣ್ಯ ಇಲಾಖೆಯ ಹ್ಯಾಮರ್ ಮಾರ್ಕ್ KNFD/G 28 ನ್ನು ಹಾಕಿ, ಉಳಿದ ಸಣ್ಣ ಸಣ್ಣ ತುಂಡುಗಳನ್ನು ಚೀಲದಲ್ಲಿ ತುಂಬಲಾಯಿತು. ತೂಕ ಮಾಡಲು ಸಾಮಗ್ರಿಗಳು ಇಲ್ಲದ ಕಾರಣ 6 ಚೀಲಗಳಲ್ಲಿ ಇದ್ದ ಶ್ರೀಗಂಧವು ಸುಮಾರು 100 ಕೆ.ಜಿ. ಇರುವುದಾಗಿ ಅಂದಾಜಿಸಲಾಗಿದೆ. ಜಪ್ತು ಮಾಡಲಾದ ಅಂಬಾಸಿಡರ್ ಕಾರು ಹಾಗೂ ಶ್ರೀಗಂಧದ ತುಂಡುಗಳನ್ನು ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು ಇವರಿಗೆ ಹೆಚ್ಚಿನ ತನಿಖೆಗಾಗಿ ಹಾಗೂ ಮುಂದಿನ ಕ್ರಮಕ್ಕಾಗಿ ದಸ್ತಗಿರಿ ಮಾಡಿ ಇಬ್ಬರು ವ್ಯಕ್ತಿಗಳೊಂದಿಗೆ ಹಾಜರು ಮಾಡಲಾಗಿದೆ.

ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು ಇವರು ಅರಣ್ಯ ಅಪರಾಧ ಮೊಕದಮ್ಮೆ ಸಂಖ್ಯೆ : 23/1999–2000 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಅಂಬಾಸಿಡರ್ ಕಾರ್ ಮತ್ತು 110 ಕೆಜಿ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರ ವಶಕ್ಕೆ ನೀಡಿರುತ್ತಾರೆ.

ವಾಹನದ ಮಾಲೀಕರು ವಿವರಗಳನ್ನು ತಿಳಿದುಕೊಳ್ಳುವ ಸಲುವಾಗಿ ಈ ಪ್ರಾಧಿಕಾರವು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರೊಂದಿಗೆ ಪತ್ರ ವ್ಯವಹಾರ ಮಾಡಲಾಗಿ ಅಂಬಾಸಿಡರ್ ಕಾರ್ ಸಂಖ್ಯೆ: ಸಿಟಿಇ–1581 ರ 'ಬಿ' ವಹಿಯ ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ 'ಬಿ' ವಹಿಯ ಎಕ್ಸಾಟ್ರಾಕ್ಟ್ ನನ್ವಯ ವಾಹನವು ಶ್ರೀ ಮಹಮ್ಮದ್ ಫೈರೋಜ್ ಬೇಗ್ ತಂದೆ ಅಬ್ದುಲ್ ಹಮೀದ್, ಮನೆ ನಂ. 1878 'ಎ' ಹಮೀದ್ ಕಾಂಪೌಂಡ್ ಕೋಡಿಬಾಗ್, ಕಾರವಾರ ಇವರ ಹೆಸರಿನಲ್ಲಿ ನೊಂದಾಯಿತವಾಗಿ ರುವುದಾಗಿಯೂ ಹಾಗೂ ಇಂಜಿನ್ ನಂ. 53117 ಮತ್ತು ಚಾಸಿ ನಂ. 439658 ಆಗಿರುತ್ತದೆ. ಹಾಗೂ ಸದರಿ ವಾಹನದ ಸಿ.ಸಿ. ಯನ್ನು ಶ್ರೀ ವಜೀದ್ ಅಲಿ ತಂದೆ ಅಬ್ದುಲ್ ಅಜೀಜ್, ಕೆ.ಪಿ.ಸಿ. ಜನ್ನತ್ ನಗರ, ಸಾಗರ ಇವರಿಗೆ ಮಾರಾಟ ಮಾಡಿದ್ದರಿಂದ ನೀಡಲಾಗಿರುವ ಕಾರಣ, ವಾಹನದ ಮಾಲೀಕರಾದ ಶ್ರೀ ವಜೀದ್ ಅಲಿ ಸಾಗರ ಇವರಿಗೆ ವಾಹನವು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗಿ ಅಮಾನತ್ತು ಪಡಿಸಿಕೊಂಡಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ವಿಚಾರಣೆ ಕೇಳಿ ನೋಟೀಸ್ ಜಾರಿ ಮಾಡಲಾಗಿ, ಸದರಿ ಶ್ರೀ ವಜೀದ್ ಅಲಿಯವರು ವಾಹನವನ್ನು 1998 ನೇ ಇಸವಿಯಲ್ಲಿ ಶ್ರೀ ಸೈಯದ್ ಆಸೀಫ್ ಅಹ್ಮದ್ ಬಿನ್ ಎಸ್.ಎ. ರವೂಫ್, ಸೈಯದ್ ಮೊಹಲ್ಲಾ, ಚೆನ್ನಗಿರಿ ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿದ ಪ್ರಯುಕ್ತ, ಪ್ರಾಧಿಕಾರದಿಂದ ಶ್ರೀ ಸೈಯದ್ ಆಸೀಫ್ ಅಹ್ಮದ್ ಬಿನ್ ಎಸ್.ಎ. ರವೋಫ್, ಸೈಯದ್ ಮೊಹಲ್ಲಾ, ಚೆನ್ನಗಿರಿ ಇವರಿಗೆ 15 ದಿನಗಳ ಕಾಲಾವಕಾಶ ನೀಡಿ, ವಾಹನವು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದರಿಂದ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ನೀಡುವಂತೆ ನೋಟೀಸ್ ಜಾರಿ ಮಾಡಲಾಯಿತು.

ಶ್ರೀ ಸೈಯದ್ ಆಸೀಫ್, ಬಿನ್ ಎಸ್.ಎ. ರವೂಫ್, ಸೈಯದ್ ಮೊಹಲ್ಲಾ, ಚೆನ್ನಗಿರಿ ಇವರು ಶ್ರೀ ಬಿ.ಕೆ. ರಹಮತುಲ್ಲಾ ಮತ್ತು ಶ್ರೀ ಎಸ್.ಎ. ರಿಜ್ವಾನ್ ವಕೀಲರು, ಚಿತ್ರದುರ್ಗ ಇವರ ಮುಖಾಂತರ ವಾಹನದ ಆರ್.ಸಿ. ಪುಸ್ತಕವನ್ನು ಸಲ್ಲಿಸಿ, ವಾಹನವನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿರುತ್ತಾರೆ. ವಾಹನವನ್ನು ಮಧ್ಯಂತರ ವಶಕ್ಕೆ ನೀಡುವ ಬಗ್ಗೆ ವಿಚಾರಣೆ ನಡೆಸಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಲಾಗುವುದಿಲ್ಲವೆಂದು ದಿನಾಂಕ 13–9–2000 ರಂದು ಆದೇಶ ನೀಡಲಾಯಿತು. ಸದರಿ ಆದೇಶದ ವಿರುದ್ಧ ಅರ್ಜಿದಾರರು ಘನ ಅಡಿಷನಲ್ ಸೆಷನ್ಸ್ ನ್ಯಾಯಾಲಯ, ಚಿತ್ರದುರ್ಗದಲ್ಲಿ ದಾಖಲಿಸಿದ್ದ ಅರ್ಜಿಯನ್ನು ಪರಿಶೀಲಿಸಿ, ದಿನಾಂಕ 13–11–2000 ರ ತನ್ನ ಆದೇಶದಲ್ಲಿ ಘನ ಅಡಿಷನಲ್ ಸೆಷನ್ಸ್ ನ್ಯಾಯಾಲಯವು ತಿರಸ್ಕರಿಸಿದೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ, ದಿನಾಂಕ 13–9–2000, 5–10–2000, 24–1–2001, 23–2–2001, 16–5–2001, 18–7–2001, 8–8–2001, 24–8–2001, 13–9–2001, 27–9–2001, 16–10–2001, 30–10–2001, 28–11–2001, 20–12–2001, 9–1–2002, 28–1–2002, 4–3–2002, 7–2–2004, 19–2–2004, 24–2–2004, 9–3–2004, 24–3–2004, 28–4–2004, 27–7–2004, 10–8–2004, 24–8–2004, 21–9–2004, 18–10–2004, 30–11–2004, 23–12–2004, 20–1–2005, 24–2–2005, 24–3–2005, 28–4–2005, 26–6–2005, 30–6–2005 ಮತ್ತು 21–7–2005 ರಂದು ವಿಚಾರಣೆ ಮಾಡಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು :**

| | |
|---|---|
| 1. ಶ್ರೀ ಆರ್. ಕುಮಾರ ಸ್ವಾಮಿ ಬಿನ್ ಆರ್. ರಂಗಪ್ಪ, ವಲಯ ಅರಣ್ಯಾಧಿಕಾರಿ, ಹಿರಿಯೂರು | PW–1 |
| 2. ಶ್ರೀ ಟಿ. ಪರಶುರಾಮಪ್ಪ ಬಿನ್ ಕೆ. ತಿಪ್ಪಯ್ಯ, ಅರಣ್ಯ ರಕ್ಷಕ, ತಾಳ್ಯ ಬೀಟ್, ಹೊಳಲ್ಕೆರೆ ವಲಯ | PW–2 |
| 3. ಶ್ರೀ ಎಲ್. ಚನ್ನೇಗೌಡ ಬಿನ್ ಶ್ರೀ ಲಿಂಗೇಗೌಡ, ವಲಯ ಅರಣ್ಯಾಧಿಕಾರಿ, ಜಗಳೂರು | PW–3 |

4. ಶ್ರೀ ಆರ್. ಚಂದ್ರಪ್ಪ ಬಿನ್ ರಂಗಪ್ಪ ನಿವೃತ್ತ ಅಬಕಾರಿ ಉಪನಿರೀಕ್ಷಕರು, ಹಿರಿಯೂರು PW–4
5. ಶ್ರೀ ಹೆಚ್.ಎಲ್. ಗುನ್ನಯ್ಯ ಬಿನ್ ಲಿಂಗಪ್ಪ ಪಿ.ಡಿ. ಕೋಟೆ, ಧರ್ಮಪುರ ಅಂಚೆ, ಹಿರಿಯೂರು PW–5
6. ಶ್ರೀ ಟಿ. ಮಂಜುನಾಥ್ ಬಿನ್ ದೊಡ್ಡವಿರುಸಪ್ಪ, ಪಿ.ಡಿ. ಕೋಟೆ, ಧರ್ಮಪುರ ಅಂಚೆ, ಹಿರಿಯೂರು PW–6

**ಪ್ರತಿವಾದಿ (ಅರ್ಜಿದಾರರ) ಪರವಾಗಿ ಸಾಕ್ಷಿಗಳು :–** ಯಾರು ಇಲ್ಲ.

ಮೇಲ್ಕಂಡ ಸಾಕ್ಷಿದಾರರ ಪೈಕಿ ಕ್ರ.ಸಂ. (6) ರ ಸಾಕ್ಷಿದಾರರನ್ನು ಹೊರತುಪಡಿಸಿ ಉಳಿದ ಎಲ್ಲಾ ಸಾಕ್ಷಿದಾರರ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಯಿತು. ಈ ಪ್ರಾಧಿಕಾರದ ಆದೇಶದನ್ವಯ ಸಹಾಯಕ ಅಭಿಯೋಜಕ ನಿರ್ದೇಶಕರು ಹಾಗೂ ಆಪಾದಿತರ ಪರ ವಕೀಲರು ಲಿಖಿತ ವಾದಗಳನ್ನು ಮಾಡಿಸಿರುತ್ತಾರೆ.

ಅಭಿಯೋಜನೆ ಪರ ಸಾಕ್ಷಿಗಳ ಹೇಳಿಕೆಯನ್ನು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರು ಹಾಗೂ ಆಪಾದಿತರ ಪರ ವಕೀಲರ ಲಿಖಿತ ವಾದಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

**ಅಂಶ:–1**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಇ–1581 ನ್ನು ಶ್ರೀಗಂಧದ ಸಮೇತ ಅಮಾನತ್ತು ಪಡಿಸಿಕೊಳ್ಳಲಾಗಿದೆಯೆ ? ಅಮಾನತ್ತು ಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ – 1963 ರ ಕಾಲಂ – 62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತು ಪಡಿಸಲಾಗಿದೆಯೆ ?

**ಅಂಶ:–2**

ಅಮಾನತ್ತು ಪಡಿಸಿಕೊಳ್ಳಲಾದ ಅಂಬಾಸಿಡರ್ ಕಾರ್‌ನಲ್ಲಿದ್ದ ಮಾಲು ಸರ್ಕಾರದ ಸ್ವತ್ತು ಎಂದು ಘೋಷಿಸಲಾದ ಶ್ರೀಗಂಧವೇ ?

**ಅಂಶ:–3**

ಅಮಾನತ್ತು ಪಡಿಸಲಾಗಿರುವ ವಾಹನದ ಮಾಲೀಕರು ವಾಹನವನ್ನು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಬಳಸಿರುವುದಿಲ್ಲ ಎಂಬುದನ್ನು ಸಾಬೀತು ಪಡಿಸಿರುವರೆ ? ಅಥವಾ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿದ್ದರೆ ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

**ಅಂಶ – 1** – **ಸಕಾರಾತ್ಮಕ**
**ಅಂಶ – 2** – **ಸಕಾರಾತ್ಮಕ**
**ಅಂಶ – 3** – **ನಕಾರಾತ್ಮಕ**

**ಅಂಶ :– 1**

ಅಬಕಾರಿ ಇಲಾಖೆಯ ಮತ್ತು ಅರಣ್ಯ ಇಲಾಖೆಯ ಸಿಬ್ಬಂದಿಗಳನ್ನು ಸೇರಿಸಿ ರಚಿಸಲಾಗಿದ್ದ ಚುನಾವಣೆ ವಿಶೇಷ ತನಿಖಾದಳವು ದಿನಾಂಕ 24–8–1999 ರಂದು ವಾಹನಗಳ ತಪಾಸಣೆ ಕಾರ್ಯವನ್ನು ಪಿ.ಡಿ. ಕೋಟೆ (ಧರ್ಮಪುರ) ಬಳಿ ನಿರ್ವಹಿಸುತ್ತಿದ್ದಾಗ, ಬೆಳಗ್ಗೆ 8.00 ಗಂಟೆಯ ಸಮಯದಲ್ಲಿ ಒಂದು ಬಿಳಿಯ ಅಂಬಾಸಿಡರ್ ಕಾರ್ ಬರುತ್ತಿದ್ದು, ಅದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲದೆ ವೇಗವಾಗಿ ಹೋಗಿದ್ದರಿಂದ, ಅರಣ್ಯ ಇಲಾಖಾ ವಾಹನ ಜೀಪ್ ಸಂಖ್ಯೆ: ಕೆಎ–16 ಜಿ–111 ರಲ್ಲಿ ಸದರಿ ಕಾರನ್ನು ಬೆನ್ನಟ್ಟಿ ಕಾರನ್ನು ನಿಲ್ಲಿಸಿ, ವಾಹನವನ್ನು ಕೂಲಂಕುಶವಾಗಿ ತಪಾಸಣೆ ಮಾಡಿದಾಗ ವಾಹನದ ಒಳಗೆ ಮತ್ತೊಂದು ನಂಬರ್ ಪ್ಲೇಟ್ (CTE-1581) ಹಾಗೂ ಆರು ಗೋಣಿ ಚೀಲಗಳಲ್ಲಿದ್ದ ಶ್ರೀಗಂಧದ ಚಕ್ಕೆಗಳು ಇದ್ದ ಕಾರಣ ಸದರಿ ವಾಹನದಲ್ಲಿದ್ದ ವ್ಯಕ್ತಿಗಳನ್ನು ವಿಚಾರಣೆ ನಡೆಸುತ್ತಿದ್ದಾಗ, ಸಮಯ ಸಾದಿಸಿ ವಾಹನದಿಂದ ಒಬ್ಬ ವ್ಯಕ್ತಿ ತಪ್ಪಿಸಿಕೊಂಡು ಓಡಿಹೋಗಿರುತ್ತಾನೆ. ವಾಹನದಲ್ಲಿ ಉಳಿದಿದ್ದ ವ್ಯಕ್ತಿಗಳು ವಾಹನದಲ್ಲಿದ್ದ ಶ್ರೀಗಂಧದ ಸಾಗಾಣಿಕೆಗೆ ಯಾವುದೇ ಪರವಾನಗಿ ಇಲ್ಲವೆಂದು ತಿಳಿಸಿರುತ್ತಾರೆ. ನಂತರ ಪಂಚರ ಸಮಕ್ಷಮ CTV - 5656 (CTE-1581) ಅಂಬಾಸಿಡರ್ ಕಾರಿನಲ್ಲಿದ್ದ ಶ್ರೀಗಂಧವನ್ನು ಅಳತೆವಾರು ವಿಂಗಡಿಸಿ, ದೊಡ್ಡ ತುಂಡುಗಳಿಗೆ 1 ರಿಂದ 35 ರವರೆಗೆ ಕೆಂಪು ಬಣ್ಣದಲ್ಲಿ ನಂಬರ್ ಹಾಕಿ, ಅರಣ್ಯ ಇಲಾಖೆಯ ಹ್ಯಾಮರ್ ಮಾರ್ಕ್ KNFD/G 28 ಹಾಕಿ, ಶ್ರೀಗಂಧದ ಒಟ್ಟು ಪ್ರಮಾಣ ಸುಮಾರು 100 ಕೆ.ಜಿ. ಇರಬಹುದು ಎಂದು ಅಂದಾಜು ಮಾಡಲಾಯಿತು ನಂತರ ಹೆಚ್ಚಿನ ತನಿಖೆಗಾಗಿ ಹಾಗೂ ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯ ಅಧಿಕಾರಿ, ಹಿರಿಯೂರು ವಲಯ, ಹಿರಿಯೂರು ರವರಿಗೆ ವಾಹನ, ವಾಹನದಲ್ಲಿದ್ದ ಶ್ರೀಗಂಧ ಹಾಗೂ ದಸ್ತಗಿರಿ ಮಾಡಿದ ಇಬ್ಬರು ವ್ಯಕ್ತಿಗಳನ್ನು ವಶಕ್ಕೆ ನೀಡಲಾಯಿತು. ವಲಯ ಅರಣ್ಯಾಧಿಕಾರಿ, ಹಿರಿಯೂರು ರವರು FOC ಸಂಖ್ಯೆ 23/99–2000 ರನ್ವಯ ಅರಣ್ಯ ಅಪರಾಧ ಪ್ರಕರಣ ದಾಖಲಿಸಿ, ಇಬ್ಬರು ಆರೋಪಿಗಳನ್ನು ಘನ ಸಿವಿಲ್ ಜಡ್ಜ್ ಮತ್ತು ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ (ಫಸ್ಟ್ ಕ್ಲಾಸ್), ಹಿರಿಯೂರು ಇವರ ಮುಂದೆ ಹಾಜರು ಪಡಿಸಿರುತ್ತಾರೆ.

ವಾಹನವನ್ನು ಮತ್ತು ಅದರಲ್ಲಿ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಳ್ಳುವ ಸಮಯದಲ್ಲಿ ಮತ್ತು ಮಹಜರ್ ನಡೆಸುವಾಗ ಅಬಕಾರಿ ಹಾಗೂ ಅರಣ್ಯ ಇಲಾಖೆಯ ಚುನಾವಣಾ ವಿಶೇಷ ದಳವು ಕರ್ನಾಟಕ ಅರಣ್ಯ ಕಾಯಿದೆ – 1963 ರ ಕಾಲಂ – 62ರ ಪ್ರಕಾರ ಎಲ್ಲಾ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವನ್ನು ಮುಂದಿನ ವಿಚಾರಣೆಗಾಗಿ ಈ ಪ್ರಾಧಿಕಾರದ ಮುಂದೆ ಸಲ್ಲಿಸಿರುತ್ತಾರೆ. ವಶಪಡಿಸಿಕೊಳ್ಳಲಾದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ರವರು ಪರೀಕ್ಷಿಸಿ ಅಮಾನತ್ತು ಪಡಿಸಿಕೊಂಡಿರುವುದು ಶ್ರೀಗಂಧವೇ ಎಂದು ದೃಢೀಕರಿಸಿರುತ್ತಾರೆ.

ವಿಚಾರಣಾ ಸಮಯದಲ್ಲಿ ಪ್ರಾಸಿಕ್ಯುಷನ್ ಸಾಕ್ಷಿ-1, ಶ್ರೀ ಆರ್. ಕುಮಾರಸ್ವಾಮಿ, ವಲಯ ಅರಣ್ಯಾಧಿಕಾರಿ ಇವರಿಗೆ CTV-5656 (CTE-1581) ಅಂಬಾಸಿಡರ್ ಕಾರನ್ನು ದಿ. 24-8-99 ರಂದು ಹಿರಿಯೂರು ತಾಲ್ಲೂಕು ಪಿ.ಡಿ. ಕೋಟೆ ಬಳಿ ಶ್ರೀಗಂಧದ ಕಳ್ಳ ಸಾಗಾಣಿಕೆ ಮಾಡುವ ಸಮಯದಲ್ಲಿ ವಶಪಡಿಸಿಕೊಂಡಿದ್ದು ನಿಜವೆಂದು ತಿಳಿಸಿರುತ್ತಾರೆ. ಸದರಿಯವರಿಗೆ ಮಹಜರನ್ನು ತೋರಿಸಲಾಯಿತು, ಮಹಜರನ್ನು ಪಿ-1ಎ ಎಂದು ಗುರುತಿಸಲಾಯಿತು, ಹಾಗೂ ಅಂಬಾಸಿಡರ್ ಕಾರನ್ನು ಮುದ್ದೆ ಮಾಲು-1 ಎಂದು ಗುರುತಿಸಲಾಯಿತು. ವಿಚಾರಣಾ ಸಮಯದಲ್ಲಿ ಕಾರನ್ನು ವಶಪಡಿಸಿಕೊಳ್ಳುವ ಸಮಯದಲ್ಲಿ ಕಾರಿನಲ್ಲಿದ್ದ ಇಬ್ಬರು ವ್ಯಕ್ತಿಗಳಾದ ಸೈಯದ್ ಜಮಾಲ್ ಮತ್ತು ಎಂ.ಬಿ. ಯೂಸುಫ್ ಇವರನ್ನು ಗುರುತಿಸುವುದಾಗಿಯೂ ಹಾಗೂ ಮುದ್ದೆ ಮಾಲು-1 ಮತ್ತು ವಶಪಡಿಸಿಕೊಂಡ ಶ್ರೀಗಂಧದ ತುಂಡುಗಳನ್ನು ನೋಡಿದರೆ ಗುರುತಿಸುವುದಾಗಿಯೂ ಸಾಕ್ಷಿ ನುಡಿದಿರುತ್ತಾರೆ. ಶ್ರೀಗಂಧದ ತುಂಡುಗಳ ಪೈಕಿ 32ನೇ ಸಂಖ್ಯೆಯ ಶ್ರೀಗಂಧದ ತುಂಡನ್ನು ತೋರಿಸಲಾಯಿತು, ಸದರಿಯವರು ಅದನ್ನು ಗುರುತಿಸಿದಾಗ ಅದನ್ನು ಮುದ್ದೆಮಾಲು-2 ಎಂದು ಗುರುತಿಸಲಾಯಿತು. ವಿಚಾರಣಾ ಸಮಯದಲ್ಲಿ ಪ್ರಥಮ ವರ್ತಮಾನ ವರದಿಯ ಪ್ರತಿಯನ್ನು ತೋರಿಸಲಾಯಿತು, ಅದನ್ನು ಪಿ-2 ಎಂದು ಗುರುತಿಸಲಾಯಿತು. ಅದರಲ್ಲಿದ್ದ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಯಿತು. ಶ್ರೀಗಂಧ ದೃಢೀಕರಣ ಪತ್ರವನ್ನು ನಿಶಾನೆ-ಪಿ3 ಎಂದು ಗುರುತಿಸಲಾಯಿತು.

ಸದರಿ ಸಾಕ್ಷಿದಾರರು ಶ್ರೀ ಎಸ್.ಎ. ರಿಜ್ವಾನ್ ಆರೋಪಿ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ದಿನಾಂಕ: 24.8.99 ರಂದು ವಶಪಡಿಸಿಕೊಳ್ಳಲಾದ ವಾಹನವನ್ನು ತಪಾಸಣೆಗೊಳಿಸುವ ಪೂರ್ವದಲ್ಲಿ 3-4 ವಾಹನಗಳನ್ನು ತಪಾಸಣೆ ಮಾಡಿದ್ದಾಗಿಯೂ ಅವುಗಳ ವಿವರಗಳನ್ನು ಈಗ ನೀಡಲು ಸಾಧ್ಯವಿಲ್ಲವೆಂಬುದಾಗಿ ತಿಳಿಸಿರುತ್ತಾರೆ. ಸ್ಥಳದಲ್ಲಿ ತೂಕ ಮಾಡಲು ತಕ್ಕಡಿ ಹಾಗೂ ತೂಕದ ಕಲ್ಲುಗಳು ಸಿಕ್ಕದ ಕಾರಣ, ಸ್ಥಳದಲ್ಲಿ ತೂಕ ಮಾಡಲಾಗಲಿಲ್ಲ. ಹಾಗೂ 6 (ಆರು) ಚೀಲಗಳಲ್ಲಿದ್ದ ಶ್ರೀಗಂಧವನ್ನು ಕೆಳಗೆ ಸುರಿದು ಪಂಚರ ಸಮಕ್ಷಮ ನೋಡಲಾಗಿದೆ. ಮಹಜರ್ ಸಮಯದಲ್ಲಿ ಗಾಡಿಯಲ್ಲಿ ಸಾಮಾನ್ಯವಾಗಿ ಇಟ್ಟಿರುವ ಕೆಂಪು ಶಾಯಿಯಿಂದ ಗಂಧದ ತುಂಡುಗಳಿಗೆ ಕ್ರಮ ಸಂಖ್ಯೆ ಹಾಕಲಾಗಿರುವುದಾಗಿಯೂ, ಹಾಗೂ ಮುದ್ದೆ ಮಾಲು-2ರ ಮೇಲೆ ಕೆಂಪು ಬಣ್ಣದಿಂದ 23/ FOC ಎಂದು ಬರೆದಿದ್ದಾಗಿಯೂ ತಿಳಿಸಿರುತ್ತಾರೆ. ಅಂಬಾಸಿಡರ್ ಕಾರಿನಲ್ಲಿ CTE-1581 ಎಂದು ನಮೂದಿಸಲಾದ ನಂಬರ್ ಪ್ಲೇಟ್ ಹಾಗೂ ಕಾರಿನ ಒಳಭಾಗದಲ್ಲಿ CTE-5656 ಎಂಬುದಾಗಿ ನಮೂದಿಸಿದ ನಂಬರ್ ಪ್ಲೇಟ್ ಇದ್ದುದಾಗಿ ತಿಳಿಸಲಾಯಿತು.

**ಪ್ರಾಸಿಕ್ಯೂಷನ್ ಸಾಕ್ಷಿ - 2** ಶ್ರೀ ಟಿ. ಪರಶುರಾಮಪ್ಪ, ಅರಣ್ಯ ರಕ್ಷಕ ಹೊಳಲ್ಕೆರೆ, ತಾಳ್ಯ ಬೀಟ್ ಇವರು ನೀಡಿದ ಸಾಕ್ಷ್ಯವು ಪ್ರಾಸಿಕ್ಯೂಷನ್ ಸಾಕ್ಷಿ - 1ರ ಹೇಳಿಕೆಗಳನ್ನು ಸಮರ್ಥಿಸುತ್ತದೆ. ಸ್ಥಳದಲ್ಲಿ ಮಾಡಲಾದ ಮಹಜರ್ ನಿಶಾನಿ-ಪಿ1ನ್ನು ಸದರಿ ಸಾಕ್ಷಿಯು ಗುರ್ತಿಸಿದ್ದು, ಅದರಲ್ಲಿದ್ದ ಅವರ ಸಹಿಯನ್ನು ಪಿ-1 ಬಿ ಎಂದು ಗುರುತಿಸಲಾಯಿತು. ಹಾಗೂ ಶ್ರೀಗಂಧದ ಸ್ಯಾಂಪಲ್ ತುಂಡು ಮುದ್ದೆ ಮಾಲು-2ನ್ನು ಸಹಾ ಗುರುತಿಸಿರುತ್ತಾರೆ. ಮಹಜರನ್ನು ಸ್ವತಃ ಬರೆದಿರುವುದಾಗಿ ಅರ್ಜಿದಾರರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ತಿಳಿಸಿರುತ್ತಾರೆ ಹಾಗೂ ಮಹಜರನ್ನು ಸ್ಥಳದಲ್ಲಿ ಪಿ.ಡಿ. ಕೋಟೆಯಿಂದ ಬರಮಾಡಿ ಕೊಳ್ಳಲಾದ ಇಬ್ಬರು ಪಂಚ ಸಾಕ್ಷಿಗಳ ಸಮಕ್ಷಮ ಬರೆದಿರುವುದಾಗಿ ತಿಳಿಸಿರುತ್ತಾರೆ.

**ಪ್ರಾಸಿಕ್ಯೂಷನ್ ಸಾಕ್ಷಿ - 3** ಶ್ರೀ ಎಲ್. ಚನ್ನೇಗೌಡ, ವಲಯ ಅರಣ್ಯಾಧಿಕಾರಿ, ಜಗಳೂರು ಇವರು ವಿಚಾರಣಾ ಸಮಯದಲ್ಲಿ ಈ ಕೆಳಗಿನಂತೆ ಸಾಕ್ಷಿ ನುಡಿದಿರುತ್ತಾರೆ. ಹಿರಿಯೂರು ವಲಯದ ಅರಣ್ಯ ಮೊಕದ್ದಮೆ ಸಂ. 23/99-2000 ಕ್ಕೆ ಸಂಬಂಧಪಟ್ಟ ಶ್ರೀಗಂಧದ ತುಂಡುಗಳನ್ನು ಪರಿಶೀಲಿಸಿ 6 ಗೋಣಿ ಚೀಲಗಳಿದ್ದ 110 ಕೆ.ಜಿ. ಚಕ್ಕೆ ಮತ್ತು ತುಂಡುಗಳು ಶ್ರೀಗಂಧ ಎಂದು ದೃಢೀಕರಿಸಿರುವುದಾಗಿ ತಿಳಿಸಿರುತ್ತಾರೆ. ದೃಢೀಕರಣ ನಿಶಾನೆ ಪಿ-3 ಇದ್ದು ಅವರ ಸಹಿ ನಿಶಾನೆ 3 ಎ ಎಂದು ಗುರುತಿಸಲಾಯಿತು. ಮಾದರಿಗಾಗಿ ತೆಗೆದ ಶ್ರೀಗಂಧದ ತುಂಡನ್ನು ಮುದ್ದೆ ಮಾಲು-2 ನ್ನು ಗುರುತಿಸಿರುತ್ತಾರೆ. ಪಾಟೀ ಸವಾಲಿನಲ್ಲಿ ಸದರಿಯವರು ಶ್ರೀಗಂಧದ ದೃಢೀಕರಣ ಪತ್ರ ನೀಡುವಲ್ಲಿ ಅನುಭವ ಮತ್ತು ತರಬೇತಿ ಆಗಿರುವುದಾಗಿ ತಿಳಿಸಿರುತ್ತಾರೆ.

**ಪ್ರಾಸಿಕ್ಯೂಷನ್ ಸಾಕ್ಷಿ - 4** ಶ್ರೀ ಆರ್. ಚಂದ್ರಪ್ಪ, ನಿವೃತ್ತ ಅಬಕಾರಿ ಉಪ ನಿರೀಕ್ಷಕರು ಸಹಾ ಪ್ರಾಸಿಕ್ಯೂಷನ್ ಸಾಕ್ಷಿ 1, 2 ಮತ್ತು 3ರ ಹೇಳಿಕೆಗಳನ್ನು ಸಮರ್ಥಿಸುತ್ತದೆ. ಪಾಟೀ ಸವಾಲಿನಲ್ಲಿ ಮಹಜರ್ ಜರುಗಿಸುವ ಕ್ರಮವನ್ನು ಬೆಳಗ್ಗೆ 9-30 ರಿಂದ ಪ್ರಾರಂಭಿಸಿ 10-30ಕ್ಕೆ ಮುಕ್ತಾಯಗೊಳಿಸಿದ್ದಾಗಿಯು ಮಹಜರನ್ನು ಕುಮಾರಸ್ವಾಮಿಯವರ ಉಕ್ತಲೇಖನದಂತೆ ಬರೆದಿರುವುದಾಗಿಯೂ ತಿಳಿಸಿರುತ್ತಾರೆ.

**ಪ್ರಾಸಿಕ್ಯೂಷನ್ ಸಾಕ್ಷಿ - 5** ಶ್ರೀ ಹೆಚ್.ಎಲ್. ಗುನ್ನಯ್ಯ, ಪಿ.ಡಿ. ಕೋಟೆ, ಹಿರಿಯೂರು ಇವರು ಪಂಚಸಾಕ್ಷಿಯಾಗಿದ್ದು, ವಿಚಾರಣಾ ಸಮಯದಲ್ಲಿ ಈ ಕೆಳಗಿನಂತೆ ಹೇಳಿಕೆ ನೀಡಿರುತ್ತಾರೆ. ಮಹಜರ್ ನಲ್ಲಿ ಪಿ1 ರಲ್ಲಿರುವ ಸಹಿಯನ್ನು ಗುರುತಿಸಿದ್ದು, ಸದರಿ ಮಹಜರಿಗೆ ಸಹಿಯನ್ನು ಹಿರಿಯೂರಿನ ಅರಣ್ಯಾಧಿಕಾರಿಗಳ ಕಛೇರಿಯಲ್ಲಿ ಬೆಳಗ್ಗೆ 11.30 ರ ಸಮಯದಲ್ಲಿ ಮಾಡಿದ್ದಾಗಿಯೂ ಹಾಗೂ ವಾಹನವನ್ನಾಗಲೀ ಅಥವಾ ಶ್ರೀಗಂದವನ್ನಾಗಲೀ ನೋಡಲಿಲ್ಲ ಎಂಬುದಾಗಿ ತಿಳಿಸಿದರು ಹಾಗೂ ಖಾಲಿ ಹಾಳೆಗೆ ಸಹಿ ಮಾಡಿರುವುದಾಗಿ ತಿಳಿಸಿದರು. ಸದರಿಯವರು ಮಹಜರ ಒಕ್ಕಣೆಗೆ ವ್ಯತಿರಿಕ್ತವಾಗಿ ಸಾಕ್ಷಿ ನುಡಿಯುತ್ತಿದ್ದ ಕಾರಣ ಸದರಿಯವರನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಲು ಸಹಾಯಕ ಅಭಿಯೋಗ

ನಿರ್ದೇಶಕರು ಕೋರಿದರು. ಪಾಟೀ ಸವಾಲಿನಲ್ಲಿ ಸದರಿ ಸಾಕ್ಷಿದಾರರು ಮಹಜರ್‌ನಲ್ಲಿನ ಒಕ್ಕಣಿಕೆಯನ್ನು ಅಲ್ಲಗಳೆದಿರುತ್ತಾರೆ. ಪಾಟೀ ಸವಾಲಿನಲ್ಲಿ, ಸಾಕ್ಷಿದಾರರು ಬಿ.ಎ ಪದವೀಧರನಾಗಿರುವುದಾಗಿಯೂ ಹಾಗೂ 1999ನೇ ಇಸವಿಯಲ್ಲಿ ಪಿ.ಡಿ. ಕೋಟೆ ಗ್ರಾಮ ಪಂಚಾಯಿತಿ ಸದಸ್ಯರಾಗಿರುವುದಾಗಿ ತಿಳಿಸಿರುತ್ತಾರೆ.

ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲ ಶ್ರೀ ಎಸ್.ಎ. ರಿಜ್ವಾನ್ ಇವರು ಮಂಡಿಸಿದ ಲಿಖಿತ ವಾದಗಳನ್ನು ಪರಿಶೀಲಿಸಲಾಗಿದೆ. ಲಿಖಿತ ವಾದಗಳನ್ನು ಪರಿಶೀಲಿಸಿದ ನಂತರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿ-5 ಶ್ರೀ ಹೆಚ್.ಎಲ್. ಗುನ್ನಯ್ಯ ಇವರು ಪದವೀಧರರಾಗಿದ್ದು, ಗ್ರಾಮ ಪಂಚಾಯತ್ ಸದಸ್ಯರಾಗಿದ್ದು, ಮಹಜರ್‌ಗೆ ಅರಣ್ಯಾಧಿಕಾರಿಗಳ ಕಛೇರಿಯಲ್ಲಿ ಖಾಲಿ ಹಾಳೆಗೆ ಸಹಿ ಮಾಡಿರುವುದಾಗಿಯು ಹಾಗೂ ಮಹಜರ್‌ನಲ್ಲಿ ಬರೆಯಲಾಗಿರುವ ಅಂಶಗಳು ತಮಗೆ ತಿಳಿದಿಲ್ಲವೆಂದು ಸಾಕ್ಷ್ಯನುಡಿದಿರುವುದನ್ನು ನಂಬಲು ಸಾಧ್ಯವಿಲ್ಲ. ಕಾರಣ ಸದರಿ ಸಾಕ್ಷಿದಾರರು ಪದವೀಧರ ಹಾಗೂ ಗ್ರಾಮ ಪಂಚಾಯತ್ ಸದಸ್ಯರಾಗಿದ್ದು, ಖಾಲಿ ಹಾಳೆಯ ಮೇಲೆ ಸಹಿ ಮಾಡಿರುವುದನ್ನು ನಂಬಲು ಸಾಧ್ಯವಿರುವುದಿಲ್ಲ. ಉಳಿದ ಎಲ್ಲಾ ಪ್ರಾಸಿಕ್ಯೂಷನ್ ಸಾಕ್ಷಿಗಳ ಹೇಳಿಕೆಗಳು ಪರಸ್ಪರ ಹೊಂದಾಣಿಕೆಯಾಗುತ್ತಿದ್ದು, ಸದರಿ ಸಾಕ್ಷಿದಾರರು ಸರ್ಕಾರದ ಅಧಿಕಾರಿ, ನೌಕರರುಗಳಾಗಿದ್ದು ಸದರಿಯವರಿಗೆ ಈ ಪ್ರಕರಣದಲ್ಲಿ ಸ್ವಂತ ಹಿತಾಸಕ್ತಿ ಇರುವುದಿಲ್ಲ ಎಂಬುದಾಗಿಯೂ ಹಾಗೂ ಸದರಿ ಸಾಕ್ಷಿದಾರರು ಸರ್ಕಾರದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಹಾಗೂ ಯಾವುದೇ ಪೂರ್ವಾಗ್ರಹವಿಲ್ಲದೆ ನಿರ್ವಂಚನೆಯಿಂದ ಕಾರ್ಯ ನಿರ್ವಹಿಸಿರುವುದಾಗಿ ಈ ಪ್ರಾಧಿಕಾರವು ನಂಬುತ್ತದೆ.

**ಈ ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಂಶ-1ಕ್ಕೆ ಉತ್ತರ ಸಕಾರಾತ್ಮಕವಾಗಿರುತ್ತದೆ.**

**ಅಂಶ :- 2**

ಕರ್ನಾಟಕ ಅರಣ್ಯ ಕಾಯ್ದೆ - 1963 ಕಾಲಂ 80, 84ರ ಪ್ರಕಾರ ಶ್ರೀಗಂಧವು ಎಲ್ಲೇ ಬೆಳೆದಿದ್ದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ - 1963 ರೆಡ್ ವಿತ್ ರೂಲ್ 154 ಮತ್ತು 155 ತಿಳಿಯಪಡಿಸುವು ದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯ ಬಗ್ಗೆ ಪ್ರಕರಣವು ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಶ್ರೀಗಂಧವನ್ನು ರಾಜ್ಯದ ಸ್ವತ್ತು ಎಂದೇ ಪರಿಗಣಿಸಲಾಗುತ್ತದೆ. ವಲಯ ಅರಣ್ಯಾಧಿಕಾರಿ ಚಿತ್ರದುರ್ಗ ಇವರು ಅಮಾನತ್ತು ಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಣ ಪತ್ರವನ್ನು ನೀಡಿರುತ್ತಾರೆ ಆದ ಪ್ರಯುಕ್ತ ಈ ಅಂಶವನ್ನು ಸಮರ್ಥಿಸಲಾಗಿದೆ.

**ಅಂಶ :- 3**

ಈ ಪ್ರಕರಣದಲ್ಲಿ ಅಂಬಾಸಿಡರ್ ಕಾರ್ ಸಂ. CTE-1581 ರ ಮಾಲೀಕರಾದ ಶ್ರೀ ಸೈಯದ್ ಆಸೀಫ್ ಅಹ್ಮದ್ ಅವರ ಪರವಾಗಿ ವಕೀಲರು ಸಲ್ಲಿಸಿರುವ ಅರ್ಜಿಯಲ್ಲಿ ವಾಹನವನ್ನು ದುರಸ್ತಿಗಾಗಿ ಗ್ಯಾರೇಜಿನಲ್ಲಿ ನಿಲ್ಲಿಸಿದ್ದು, ಗ್ಯಾರೇಜಿನಿಂದ ವಾಹನವು ಕಾಣೆಯಾಗಿರುವುದಾಗಿಯೂ ಹಾಗೂ ಈ ಬಗ್ಗೆ ಪೊಲೀಸ್ ಅಧಿಕಾರಿಗಳಿಗೆ ಮೌಖಿಕವಾಗಿ ದೂರು ಸಲ್ಲಿಸಿದ್ದಾಗಿ ತಿಳಿಸಿರುತ್ತಾರೆ. ಮೇಲ್ಕಂಡ ಅಂಶಗಳನ್ನು ಗಮನಿಸಿದಲ್ಲಿ ವಾಹನದ ಮಾಲೀಕರು ವಾಹನವು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಬಳಕೆಯಾಗದಂತೆ ಯಾವುದೇ ರೀತಿಯ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಂಡಿಲ್ಲದಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಭಾರತೀಯ ಸಾಕ್ಷಾಧಾರ ಅಧಿನಿಯಮ ಸೆಕ್ಷನ್-101 ಮತ್ತು 106 ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71(ಬಿ) (2) ರನ್ವಯ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಲ್ಪಟ್ಟಿರುವುದಿಲ್ಲ ಎಂಬುದನ್ನು ಸಾಬೀತು ಪಡಿಸುವ ಜವಾಬ್ದಾರಿ ಇರುತ್ತದೆ. ಅಂಶ-3 ಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರು ಅಥವಾ ಏಜೆಂಟರು ವಾಹನದ ದುರ್ಬಳಕೆಯ ಬಗ್ಗೆ ಯಾವುದೇ ಮುಂಜಾಗರೂಕತಾ ಕ್ರಮ ಕೈಗೊಂಡಿರುವುದು ಕಂಡು ಬಂದಿರುವುದಿಲ್ಲ.

ಸಹಾಯಕ ಅಭಿಯೋಗ ನಿರ್ದೇಶಕರು ಮತ್ತು ಆಪಾಧಿತರ ಪರ ವಕೀಲರ ವಾದ ಪ್ರತಿವಾದಗಳನ್ನು ಆಲಿಸಿದ ನಂತರ ವಾಹನವನ್ನು ಉದ್ದೇಶ ಪೂರ್ವಕವಾಗಿ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಬಳಸಲಾಗಿರುವುದು ಸಾಬೀತಾಗಿರುವುದರಿಂದ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಎಸ್. ಮುತ್ತಯ್ಯ, ಭಾಅಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ - 1963 ರ ಸೆಕ್ಷನ್ - 71 (ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಅಂಬಾಸಿಡರ್ ಕಾರ್ ಸಂ. CTE-1581 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 110 ಕೆಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಬಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸುತ್ತೇನೆ.

ಈ ಆದೇಶವನ್ನು ದಿನಾಂಕ: 29-02--2006 ರಂದು ತೆರೆದ ನ್ಯಾಯಾಲಯದಲ್ಲಿ ನೀಡಲಾಗಿದೆ.

ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಚಿತ್ರದುರ್ಗ ವಿಭಾಗ, ಚಿತ್ರದುರ್ಗ

ಪಿ.ಆರ್. 770